# ಕಿಂದರಿ ಜೋಗಿ....
# ಪುಣ್ಯಕೋಟಿ....
# ಕಾಗೆ ಕಲಿತ ಪಾಠ

(ನಾಟಕಗಳು)

ಡಾ. ವಿಜಯಾ ಸುಬ್ಬರಾಜ್



ಅಕ್ಷರ ಮಂದಿರ

KINDARIJOGI, PUNYAKOTI, KAGEKALITHA PAATA - Dream

Written by
**Dr. Vijaya Subbaraj**
No. 51, Hamsi, Ist 'A' Cross
35th Main
Banagiri nagara
Banashankari 3rd Stage
Bangalore - 560 085
Mobile : 99869 28876

Published by
**Akshara Mandira**
No. 277/3, 5th Cross
Vidhana Soudha Extn.,
Laggere
Bangalore - 560 058



First Edition : 2015
Price : ₹ 80/-
Pages : iv + 92 = 96
Paper Used : 80 GSM Maplitho
Book Size : 1/8th Demmy

Printed by
**Shakthi Printers & Publishers**
Bengaluru- 560 058

# ನನ್ನ ಮಾತು

ಪ್ರಿಯ ಓದುಗರೆ,

'ಕಿಂದರಿ ಜೋಗಿ', 'ಪುಣ್ಯಕೋಟಿ' ಮತ್ತು 'ಕಾಗೆ ಕಲಿತ ಪಾಠ' ಮಕ್ಕಳಿಗಾಗಿ ಬರೆದ ನನ್ನ ಮೊಟ್ಟ ಮೊದಲ ನಾಟಕ ಸಂಕಲನ. ಇದರಲ್ಲಿ ಮೂರು ಪುಟ್ಟ ಪುಟ್ಟ ನಾಟಕಗಳಿವೆ. 'ಕಾಗಾಯಣ' ಅಥವಾ 'ಕಾಗೆ ಕಲಿತ ಪಾಠ' ಒಂದು ಸ್ವತಂತ್ರ ನಾಟಕ, ಮತ್ತೆರಡು ನಾಟಕಗಳು 'ಕಿಂದರಿ ಜೋಗಿ', 'ಪುಣ್ಯಕೋಟಿ', 'ಗೋವಿನ ಹಾಡು ಮತ್ತು ಮೂಲ ಆಂಗ್ಲ ಕವಿತೆ 'ಪೈಡ್ ಪೈಪರ್' ಕುವೆಂಪು ಅವರ ಕಿಂದರಿಜೋಗಿ, ಕವಿತೆಗಳನ್ನು ಆಧರಿಸಿ, ಸ್ವಲ್ಪ ಬದಲಾವಣೆ ಮಾಡಿಕೊಂಡು ರೂಪಾಂತರಿಸಿ ಬರೆದ ನಾಟಕಗಳಾಗಿವೆ. ಕವಿತೆಗಳನ್ನು ಹಿನ್ನೆಲೆಯಲ್ಲಿ ಹಾಡಿ, ಅದರ ಕಥಾನಕವನ್ನು ಅಭಿನಯಿಸಿ ತೋರಿಸಲಾಗುತ್ತಿತ್ತು ಮತ್ತು ಈಗಲೂ ತೋರಿಸಲಾಗುತ್ತಿದೆ. ಆದರೆ ಮಕ್ಕಳೇ ಸ್ವತಃ ಮಾತಾಡಿ ಅಭಿನಯಿಸಲೆಂಬ ಆಶಯದೊಂದಿಗೆ ಸಂಭಾಷಣೆಗಳನ್ನು ಸೃಷ್ಟಿಸಿದ್ದೇನೆ. ಕಥಾನಕದ ಭಾವ ಮಕ್ಕಳೂ ಅನುಭವಿಸಿ ಅರ್ಥ ಮಾಡಿಕೊಳ್ಳಲಿ ಎಂಬ ಉದ್ದೇಶ ನನ್ನದಾಗಿದೆ.

'ಕಾಗಾಯಣ' ನಾಟಕವನ್ನು ಮೂರು ವರ್ಷಗಳ ಹಿಂದೆ ವಿಜಯನಗರದ ಮಕ್ಕಳ ನಾಟಕ ಸಂಸ್ಥೆಯಾದ 'ಬಿಂಬ' ಮೊದಲ ಬಾರಿಗೆ ರವೀಂದ್ರ ಕಲಾಕ್ಷೇತ್ರದಲ್ಲಿ ಸುಮಾರು ನಲವತ್ತು ಮಕ್ಕಳನ್ನು

ಬಳಸಿಕೊಂಡು ಅದ್ಭುತವಾಗಿ ರಂಗಪ್ರದರ್ಶನ ನೀಡಿತು. ಅವರಿಗೆ ನನ್ನ ಕೃತಜ್ಞತೆಗಳು. ಅದರ ಯಶಸ್ಸು, ಅದರಲ್ಲಿನ ನೀತಿ ಸಂದೇಶ, ಇವುಗಳಿಂದ ಪ್ರಭಾವಿತರಾದ ಶ್ರೀ ಮಣಿವಣ್ಣನ್ ಎನ್ನುವವರು, ತಾವು ಮಕ್ಕಳಿಗಾಗಿ ನಡೆಸುವ ಬೇಸಿಗೆಯ ಶಿಬಿರದ ವತಿಯಿಂದ, ಈ ನಾಟಕವನ್ನು ಇಂಗ್ಲಿಷಿಗೆ ಭಾಷಾಂತರಿಸಿ ಎರಡು ಪ್ರದರ್ಶನಗಳನ್ನು ತುಂಬಾ ಯಶಸ್ವಿಯಾಗಿ ನೀಡಿದರು. ನನ್ನ ನಾಟಕದ ಖ್ಯಾತಿಗೆ ಕಾರಣರಾದರು. ಅವರ ಮೆಚ್ಚಿಗೆ ಪ್ರೋತ್ಸಾಹಗಳಿಂದ ಪ್ರೇರಿತಳಾಗಿ ಪ್ರತಿವರ್ಷವೂ ಮಕ್ಕಳಿಗಾಗಿ ಒಂದು ನಾಟಕ ಬರೆದು ಕೊಡುತ್ತೇನೆಂದು ಮಾತುಕೊಟ್ಟಿದ್ದೆ. ಪರಿಣಾಮವಾಗಿ ಅದರೊಂದಿಗೆ ಪುಣ್ಯಕೋಟಿ, ಕಿಂದರಜೋಗಿ ನಾಟಕಗಳು ಮೈತಳೆದು ಈ ಸಂಕಲನದಲ್ಲಿ ಸೇರಿಕೊಂಡಿವೆ.

ಈ ಕೃತಿಯನ್ನು ಪ್ರಕಟಿಸುತ್ತಿರುವ ಅಕ್ಷರ ಮಂದಿರದ ಗೆಳೆಯರಿಗೆ ಮತ್ತು ಅಂದವಾಗಿ ಮುದ್ರಿಸಿದ ಮುದ್ರಕರಿಗೆ, ಮುಖಪುಟ ರಚಿಸಿಕೊಟ್ಟ ಕಲಾವಿದರಿಗೆ ಅಭಾರಿಯಾಗಿದ್ದೇನೆ.

ಓದುಗರಾದ ನೀವು ನನ್ನ ಈ ಮೊದಲ ಪ್ರಯತ್ನದ ಮಕ್ಕಳ ನಾಟಕಗಳನ್ನು ಪ್ರೀತಿಯಿಂದ ಒಪ್ಪಿಕೊಳ್ಳುತ್ತೀರೆಂದು ಭಾವಿಸುತ್ತೇನೆ.

**– ಡಾ. ವಿಜಯಾ ಸುಬ್ಬರಾಜ್**

# ಕಿಂದರಿ ಜೋಗಿ

## ದೃಶ್ಯ – 1

(ರಂಗದ ಮೇಲೆ ಜನರು ಗಾಬರಿಯಿಂದ ಓಡಾಡುತ್ತಿದ್ದಾರೆ. ತಮ್ಮತಮ್ಮಲ್ಲಿಯೇ ಮಾತನಾಡಿಕೊಳ್ಳುತ್ತಿದ್ದಾರೆ. ಗುಂಪಿನಲ್ಲಿ ಸಿಟ್ಟು, ಅಸಮಾಧಾನ, ರೋಷ ಎದ್ದು ಕಾಣುತ್ತಿದೆ.)

ನಾಗರಿಕ : (ಸಿಟ್ಟಿನಿಂದ) ಬನ್ನಿ ಇನ್ನು ಇಲ್ಲಿ ನಿಂತಿದ್ದು ಸಾಕು. ಹೀಗೆ ಬಿಟ್ಟರೆ ನಮ್ಮನ್ನೂ ತಿಂದು ಮುಗಿಸಿ ಊರ ತುಂಬ ಹೆಣಗಳೂ ಅಸ್ಥಿಪಂಜರಗಳು ಬಿದ್ದಿರುತ್ತೆ. ಯಾವುದೂ ಇವತ್ತು ಇತ್ಯರ್ಥ ಆಗಬೇಕು.

2ನೇ ನಾಗರಿಕ : ಹೌದು.... ಹೌದು. ನಾವೆಲ್ಲಾ ಒಟ್ಟಾಗಿ ಹೋಗಿ ಮುತ್ತಿಗೆ ಹಾಕದಿದ್ದರೆ ನಮ್ಮ ಗೌಡನ ಕಿವಿಗೆ ಬೀಳೋದೇ ಇಲ್ಲ.

3ನೇ ನಾಗರಿಕ : ಅಬ್ಬಬ್ಬ! ಅವುಗಳ ಕಾಟಕ್ಕೂ ಒಂದು ಮಿತಿ ಬೇಡವೇ? ಎಲ್ಲಿಂದ ಈ ಪಾಟಿ ವಕ್ರಿಸಿಕೊಂಡವೋ ಗೊತ್ತಾಗ್ತಾನೆ ಇಲ್ಲ.

(ಅಷ್ಟರಲ್ಲಿ ಒಬ್ಬ ದಾರಿಹೋಕ ಅವರಿದ್ದಲ್ಲಿಗೆ ಬರುತ್ತಾನೆ. ಜನರ ಗುಂಪು ನೋಡಿ ಕುತೂಹಲದಿಂದ ಅವರ ಬಳಿ ಸಾರಿ ಒಬ್ಬನನ್ನು ಮಾತಾಡಿಸುತ್ತಾನೆ.)

ದಾರಿಹೋಕ : ಅಣ್ಣಾ ಇದೇನು ಇಲ್ಲಿ? ಊರಿಗೆ ಊರೇ ಸೇರಿರುವ ಹಾಗೆ ಕಾಣುತ್ತೆ. ನಿಮ್ಮ ಸಿಟ್ಟು, ಆರ್ಭಟ, ಆತುರ ನೋಡಿದರೆ ಏನೋ ಸಮಸ್ಯೆ ಇರಬೇಕಂತ ಅನ್ಸತ್ತೆ. ನಿಮಗೆ ಅಭ್ಯಂತರ ಇಲ್ಲದಿದ್ದರೆ ಅದೇನೂಂತ ತಿಳ್ಕೊಳ್ಳಬಹುದೇನು?

ಒಬ್ಬ : ತಿಳ್ಕೊಳ್ಳೋದೇನು ಬಂತು, ಸ್ವಲ್ಪ ಹೊತ್ತು ಹೀಗೇ ನಿಂತಿರಿ. ನಮ್ಮ ಸಮಸ್ಯೆ ಏನೂಂತ ಗೊತ್ತಾಗುತ್ತೆ.

2ನೆಯ ನಾಗರಿಕ : ಸ್ವಾಮಿ ನಮ್ಮನ್ನು ಕಾಡ್ತಿರೋದು ಸಮಸ್ಯೆ ಅಲ್ಲ. ಇಲಿಗಳು...! ಇಲಿಗಳು!!

ದಾರಿಹೋಕ : (ಆಶ್ಚರ್ಯದಿಂದ) ಏನಂದೆ! ಇಲಿಗಳು!! ಇಲಿಗಳಿಗೆ ಇಷ್ಟೊಂದು ಹೆದರಿಕೊಳ್ಳಬೇಕೇ? ಬೋನುಗಳಿಟ್ಟೋ ಪಾಷಾಣ ಇಟ್ಟೋ ಸಾಯಿಸಿ ಎಸೆದರೆ ಆಯ್ತು.

ಇನ್ನೊಬ್ಬ : ಸ್ವಾಮಿ ನಿಮಗೆ ನಮ್ಮ ಸಮಸ್ಯೆ ಸರಿಯಾಗಿ ಅರ್ಥ ಆಗಿಲ್ಲ ಬಿಡಿ... ಒಂದು.... ಎರಡೂ.... ಮೂರೂ.... ಹತ್ತು ಆದರೆ ನೀವು ಹೇಳಿದ ಹಾಗೆ ಸಾಯಿಸಬಹುದು. ಆದರೆ ಲಕ್ಷ ಲಕ್ಷ ಇಲಿಗಳು. ತಿನ್ನೋ ತಿಂಡಿಗೆ, ಉಡೋ ಬಟ್ಟೆಗೆ, ತುಂಬಿಟ್ಟರೋ ಧಾನ್ಯಕ್ಕೆ... ಇಲಿಗಳೇ ವಾರಸುದಾರರು. ಹೆಜ್ಜೆ ಇಟ್ಟಲ್ಲಿ ನಿಂತಲ್ಲಿ, ಕೂತಲ್ಲಿ ಇಲಿಗಳೇ ಇಲಿಗಳು! ಅಲೆ ಅಲೆಯಾಗಿ ಬಂದೂ ಬಂದೂ ಒಂದು ದೊಡ್ಡ ಮೂಷಕ ಸಾಗರವೇ ನಮ್ಮ ಬೊಮ್ಮನಹಳ್ಳೀನಾ ಮುಳುಗಿಸ್ತಿದೆ.

ಮತ್ತೊಬ್ಬ : ಹೇಳಬೇಕಂದ್ರೆ ಈ ಇಲಿಗಳ ಕಾಟಕ್ಕೆ ನಾವು ಅನುಭವಿಸ್ತಿರೋ ಗೋಳಾಟಕ್ಕೆ ಮಿತಿಯೇ ಇಲ್ಲ. ಸೊಕ್ಕಿ ಸೊಕ್ಕಿ ಓಡಾಡುವ, ಕೆನೆವ, ಜಗಿವ ಇಲಿಗಳಿಗೆ ನಾಯಿ ಬೆಕ್ಕುಗಳು ಹೆದರಿ ಊರು ಬಿಟ್ಟು ಓಡಿವೆ. ಇನ್ನೇನು ಹೀಗೇ ಆದರೆ ನಾವೂ ಊರು ಬಿಡಬೇಕಾಗುತ್ತೆ.

ಇನ್ನೊಬ್ಬ : ಇಲ್ಲಿ ಕೇಳಿ ಸ್ವಾಮಿ. ಅವುಗಳ ರಂಪಾಟ, ಮಾಡೊ ಅವಾಂತರ, ಯಾವ ಲಂಗೂ ಲಗಾಮಿಲ್ಲದೆ, ಯಾರ ಹೆದರಿಕೆ ಗಿದರಿಕೆ ಇಲ್ಲದೆ ರಾಜಾರೋಷವಾಗಿ ಸಿಕ್ಕ ಸಿಕ್ಕದ್ದನ್ನೆಲ್ಲಾ ಧ್ವಂಸಮಾಡ್ತಿವೆ. ಅವು ಮಾಡ್ತಿರೋದು ಒಂದೇ ಎರಡೇ? ಅನ್ನದ ಮಡಕೆ ಒಡೆಯುತ್ತವೆ. ತಟ್ಟೆ, ಸೌಟು ಯಾವುದನ್ನೂ ಬಿಡದೆ ನೆಕ್ಕಿ ನಲಿಯುತ್ತವೆ. ಧಾನ್ಯದ ಚೀಲಗಳನ್ನೆಲ್ಲಾ ಬರಿದು ಮಾಡುತ್ತವೆ. ಬಟ್ಟೆ ಬರೆ ಎಲ್ಲ ಚಿಂದಿ ಚಿಂದಿ ಮಾಡುತ್ತವೆ.

**(ಅಷ್ಟರಲ್ಲಿ ಇನ್ನೊಂದು ಗುಂಪು (ಮೇಳ) ರಂಗ ಪ್ರವೇಶಿಸುತ್ತದೆ. ಹಾಡಿನ ಧಾಟಿಯಲ್ಲಿ)**

ಮೇಳ : ಅಯ್ಯೋ ಅಯ್ಯೋ! ದೇವರೆ ರಕ್ಷಿಸು
ಇಲಿಗಳ ಕಾಟವ ಸೈರಿಪೆವೆಂತು
ಮನೆ ಮಠ ಮಕ್ಕಳ ಸುಖ ಬರಿದಾಯಿತು. ಕಾಳಿಗೆ ಕುತ್ತು
ಬಾಳಿಗೆ ಕುತ್ತು
ಬಾಯಿಗಾಯಿತು ಬರಿ ಮಣ್ಣೇ ತುತ್ತು
ಉಟ್ಟ ಉಡುಗೆಗಳ
ತೊಟ್ಟ ತೊಡವುಗಳ
ನೀಳ ಜಡೆಗಳ
ಕಪ್ಪು ಕೊಡೆಗಳ
ಬಳಕು ನಡುಗಳ
ಬಲಿತ ತೊಡೆಗಳ
ಸೀರೆ ರವಿಕೆಗಳ
ಪಂಚೆ ಪೇಟಗಳ
ಕಾಳು ಚೀಲಗಳ
ನಡೆವ ಕಾಲುಗಳ! ಯಾವುದು ಎಲ್ಲಿ

ಏನಂದರೆ ಅದ
ಜಗಿಜಗಿದು
ಅಗಿದು ಮುಕ್ಕಿದವು
ತಂದದ್ದೆಲ್ಲವ
ಮೇಯುತ ತಿಂದು
ಸೊಕ್ಕಿದವು
ಊರೇ ನಮದೆನೆ
ಹರಿದಾಡಿದವು
ಒಂದೆರಡಲ್ಲ ಲಕ್ಷ ಲಕ್ಷಗಳು! ಸಣ್ಣಲಿ ದೊಡ್ಡಲಿ
ಮೂಗಿಲಿ ಹುಡುಗಿಲಿ
ಮುದಿಯಿಲಿ ಮೆದುವಿಲಿ
ಬಗೆಬಗೆಯಲಿ
ಕಾಡುತ ನಮ್ಮನು
ಗೋಳುಗೊಳಿಸಿದೆ
ಕೇಳುವರಿಲ್ಲವೆ
ಪೊರೆಯುವರಿಲ್ಲವೆ
ಮೊರೆಯಾಲಿಸುವ ಮಂದಿಯಿಲ್ಲವೆ? ಕೋಲಿಗೆ ಸಿಗವು
ಖಡ್ಗಕೆ ಸಿಗವು
ಪೂಜೆ ಹೋಮಗಳು
ಹರಕೆ ಮಂತ್ರಗಳು
ಏನೆಲ್ಲವೂ ಬರಿ ಬರಿದಾಯ್ತು
ಹಾದಿಯ ಕಾಣದೆ ಕಂಗೆಟ್ಟಿಹೆವು
ದಾರಿಯ ತೋರೋ ಶಂಕರನೆ
ಬಂದು ರಕ್ಷಿಸಲಿ ನಿನ್ನ ತನಯನೇ
ಪಾರಾಗಿಸು ಹೇ ದೇವ ದೇವನೇ

ದಾರಿಹೋಕ : (ಮೇಳದವರಿಗೆ) ಅಯ್ಯಾ ನಿಮ್ಮೆಲ್ಲರ ಸಂಕಟ ಅರ್ಥವಾಗುತ್ತಿದೆ. ಹೀಗೆ ಒಬ್ಬೊಬ್ಬರೂ ಅಳಲಿ ಬಳಲಿದರೆ ಪ್ರಯೋಜನವಿಲ್ಲ. ನಿಮ್ಮ ಊರಿನ ದೊರೆಯನ್ನು ಮಾತಾಡಿ ಏನಾದರೂ ಪರಿಹಾರ ಯೋಚಿಸಿ.

ಇನ್ನೊಂದು
ಗುಂಪು : ಹೌದು... ಹೌದು ನೀವು ಹೇಳಿದ್ದೇ ಸರಿ. ನಾವೂ ಅದಕ್ಕೇ ಹೊರಟಿದ್ದೀವಿ. ನಮ್ಮ ಯಜಮಾನ ಗೌಡರೇ ನಮ್ಮ ಪ್ರಭುಗಳು. ದೊರೆಗಳು. ನೋಡೋಣ, ನಡಿಯಿರಿ. **(ಎಲ್ಲರೂ ಸೇರಿ ಒಂದು ದೊಡ್ಡ ಜನ ಪ್ರವಾಹವೇ ಊರ ಗೌಡರ ಮನೆಯತ್ತ ಸಾಗುತ್ತದೆ. ಹಾಗೆಯೇ ಅವರ ಘೋಷಣೆಗಳೂ ಕೇಳಿಸುತ್ತವೆ. "ಇಲಿಗಳ ಕಾಟ ತಪ್ಪಿಸಿ, ಕಾಟ ತಪ್ಪಿಸಿ, ಊರ ಪ್ರಾಣ ಉಳಿಸಿ. ಮಂದಿ ಮಕ್ಕಳ ಕಾಪಾಡಿ.... ಯಜಮಾನರು ನಮ್ಮ ಮೊರೆ ಆಲಿಸಬೇಕು" ಎಂದೆಲ್ಲಾ ಕೇಳಿಸುತ್ತವೆ. ಸ್ವಲ್ಪ ಹೊತ್ತಿನ ನಂತರ ಗುಂಪು ಗೌಡರ ಮನೆ ಮುಂದೆ ಸೇರುತ್ತೆ)**

ಗುಂಪಿನ
ನಾಯಕ : (ಮುಂದೆ ಬಂದು) ನೀವೆಲ್ಲ ಶಾಂತ ವಾಗಿರಿ. ನಾನೊಬ್ಬ ಮುಂದೆ ಹೋಗಿ ಅವರನ್ನು ಕರೀತೀನಿ. ಗೌಡರು ನಮ್ಮ ಸಂಕಟಾನ ಅರ್ಥ ಮಾಡ್ಕೋತಾರೆ. (ಬಾಗಿಲ ಬಳಿ ನಿಂತು) ಯಜ ಮಾನರೇ... ಯಜಮಾನರೇ... ನಿಮ್ಮನ್ನು ಕಾಣೋಕೆ ಮಂದಿಯೆಲ್ಲಾ ಬಂದಿದ್ದಾರೆ. ದಯವಿಟ್ಟು ಹೊರಗೆ ಬನ್ನಿ.
**(ಗೌಡರು ಜಬರದಸ್ತಾಗಿ ಸಿಂಗಾರಗೊಂಡು ಠೀವಿಯಿಂದ ಬಾಗಿಲಲ್ಲಿ ಕಾಣಿಸಿಕೊಳ್ಳುತ್ತಾರೆ)**

ಮುಂದಾಳು : ಯಜಮಾನರೆ, ಮುಂದೆ ಬನ್ನಿ. ನಿಮ್ಮ ಪ್ರಜೆಗಳು, ಊರ ಮಂದಿ ತಮ್ಮಲ್ಲಿ ತಮ್ಮ ಕಷ್ಟ ನಿವೇದಿಸಿ ಕೊಳ್ಳೋಕೇಂತ ಬಂದಿದ್ದಾರೆ.

**(ಗೌಡ ಹೊರಗೆ ಕಾಣಿಸಿಕೊಳ್ಳುತ್ತಾನೆ. ಗೌಡನ ಆ ಕಡೆ ಈ ಕಡೆ ಇಬ್ಬರು ಆಳುಗಳು ಮೈಗಾವಲಾಗಿ ನಿಂತಿದ್ದಾರೆ)**

**ಗೌಡ** : ಏನ್ರಯ್ಯ ಊರಿಗೆ ಊರೇ ಗುಂಪು ಕಟ್ಟಿಕೊಂಡು ಬಂದು ಬಿಟ್ಟಿದ್ದೀರಿ. ಏನು ನಮ್ಮ ಮೇಲೆ ಧಾಳಿ ಮಾಡೋ ಯೋಚನೆ ಇದೆಯೋ ಹೇಗೆ?

**ಮುಂದಾಳು** : ಯಜಮಾನ್ರೆ, ತಾವು ನಮ್ಮನ್ನು ಅರ್ಥಮಾಡಿಕೊಳ್ಳಿ. ನಿಮ್ಮ ಮೇಲೆ ಧಾಳಿ ಮಾಡೋ ಮನಸ್ಸಲ್ಲ ನಮ್ಮದು. ನೀವು ನಮ್ಮ ದೊರೆ. ಈ ಊರನ್ನು ಆಳುವ ಪ್ರಭು. ಊರಿನ ಪಂಚಾಯಿತಿಯ ಮುಖ್ಯಸ್ಥರು. ಊರಿನ ರಕ್ಷಣೆ, ಊರ ಜನರ ಜವಾಬ್ದಾರಿ ನಿಮಗೆ ಸೇರಿದ್ದು. ಅದಕ್ಕೇ ನಮ್ಮ ಕಷ್ಟ ಹೇಳ್ಕೊಳ್ಳೋಕೆ ನಾವೆಲ್ಲ ನಿಮ್ಮ ಹತ್ತಿರ ಬಂದಿದ್ದೀವಿ.

**ಜನ** : ಹೌದು ದಣಿ. ನಮ್ಮ ಸಮಸ್ಯೆ ನಮ್ಮ ಕಷ್ಟ ನಿಮಗೆ ಹೇಳಿಕೊಳ್ಳದೆ ಪರಿಹಾರ ಮಾಡ್ಕೊಳ್ಳೋಕೆ ಸಾಧ್ಯವೇ ಇಲ್ಲದಂತಾಗಿದೆ. ನೀವೇ ನಮ್ಮನ್ನು ಕಾಪಾಡಬೇಕು.

**ಗೌಡ** : ಏನಪ್ಪ ನಿಮಗೆ ಬಂದಿರೋ ಸಮಸ್ಯೆ. ಮಳೆ, ಬೆಳೆ ಎಲ್ಲಾ ಚೆನ್ನಾಗಿ ಇದೆಯಲ್ಲ.

**ಜನ** : ದೇವರ ದಯೆ, ಅದಕ್ಕೇನೂ ಕಡಿಮೆಯಾಗಿಲ್ಲ. ಆದರೆ ನಮಗೆ ತೊಂದರೆ ಆಗಿರೋದು ಇಲಿ, ಹೆಗ್ಗಣಗಳ ಕಾಟದಿಂದ. ಊರಿಗೆ ಊರೇ ತತ್ತರಿಸಿ ಹೋಗಿದೆ. ನಿಮಗೂ ಇದರ ಅನುಭವ ಆಗಿರಲೇಬೇಕು.

**ಗೌಡ** : (ಬೆಚ್ಚಿ) ಹೌದು ಇಲಿಗಳು!! ಖಂಡಿತ ಅವುಗಳ ಸಂಹಾರ ಆಗಲೇಬೇಕು. ನಿಮಗೆ ಮಾತ್ರ ಅಲ್ಲ, ನನಗೂ ಆ ಸಮಸ್ಯೆ ಭಯಂಕರವಾಗಿ ಕಾಡಿದೆ. ಎಲ್ಲಿ ನೋಡಿದರೂ ಅವುಗಳದೇ ಹಾವಳಿ. ಒಂದು ಇಲಿ ಸತ್ತರೆ ಹತ್ತು ಇಲಿ ಹುಟ್ಟಿಕೊಳ್ತಿವೆ. ಹೊಲ, ಗದ್ದೆ, ತೋಟ, ತುಡಿಕೆ, ಮನೆ, ಮಠ ಯಾವುದೂ ಬಿಟ್ಟಿಲ್ಲ.

ಒಬ್ಬ ಪ್ರಜೆ : ನಮ್ಮ ಮಕ್ಕಳಿಗೆ ತಿಂಡಿ ಇಲ್ಲ.

ಇನ್ನೊಬ್ಬ : ಮಕ್ಕಳಿಗೇನು, ನಮಗೂ ಅಷ್ಟೇ! ತಿಂಡಿ ತೀರ್ಥಕ್ಕೆ, ನೆಮ್ಮದಿಯಾದ ನಿದ್ದೆಗೆ ದಿಂಬು, ದಾವಳಿ, ಹಾಸಿಗೆ, ಪಾಸಿಗೆ ಎಲ್ಲಕ್ಕೂ ಸಂಚಕಾರ.

ಮತ್ತೊಬ್ಬ : ಯಾವ ಮಾಯದಲ್ಲಿ ಹೇಗೆ ವಕ್ಕರಿಸುತ್ತವೋ ಅರ್ಥವೇ ಆಗೋಲ್ಲ. ಭಟ್ಟರ ಜನಿವಾರ, ಐಗಳ ಪಂಚೆ, ಮಕ್ಕಳ ಪಾಟಿ ಚೀಲ, ಹೆಂಗಸರ ಜಡೆ, ಗಂಡಸರ ಅಂಗಿ ಪಂಚೆಗಳು – ಡಬ್ಬಗಳು, ಪಾತ್ರೆ ಪರಡಿ, ಧಾನ್ಯದ ಚೀಲಗಳು ಯಾವುದನ್ನೂ ಬಿಡದೆ ಧ್ವಂಸ ಮಾಡ್ತಿವೆ.

ಮುಂದಾಳು : ಯಜಮಾನ್ರೆ, ಇವರ ಗೋಳು ಕೇಳಿದರಲ್ಲ! ನೀವೂ ಸೇರಿದಂತೆ ಊರಲ್ಲಿ ಯಾರಿಗೂ ನೆಮ್ಮದಿಯಿಲ್ಲ. ಹೌಹಾರಿ ಹೋಗಿದ್ದಾರೆ. ಇವುಗಳ ಸಂಹಾರ ನಿಯಂತ್ರಣದ ಬಗ್ಗೆ ಏನಾದರೂ ಉಪಾಯ ಯೋಚಿಸಲೇಬೇಕು.

ಗೌಡ : ಹೌದು ಉಪಾಯ ಯೋಚಿಸಲೇಬೇಕು. ಹೇಗೆ ಮಾಡಬೇಕು, ಯಾರಿಂದ ಈ ಕೆಲಸ ಸಾಧ್ಯವಾಗಬಲ್ಲದು? (ಯೋಚಿಸುತ್ತಾನೆ)

ಮುಂದಾಳು : ಯಜಮಾನರೇ ತಾವು ತಿಳಿದುಕೊಳ್ಳದಿದ್ದರೆ ಒಂದು ಸಲಹೆ! ಇಲಿಗಳನ್ನು ನಾಶಮಾಡಿ, ಸಮಸ್ಯೆ ಪರಿಹಾರ ಮಾಡಿದವರಿಗೆ ಏನಾದರೂ ಬಹುಮಾನ ಘೋಷಿಸಿದರೆ!?

ಗೌಡ : (ಆಶ್ಚರ್ಯದಿಂದ.... ಮೆಚ್ಚುಗೆಯಿಂದ) ಎಲಾ! ಎಲಾ! ಒಳ್ಳೇ ಉಪಾಯಾನೇ! (ಮುಂದಾಳಿನ ಕಡೆ ನೋಡಿ) ಭೇಷ್, ತುಂಬಾ ಒಳ್ಳೆ ಯೋಚನೆ. ಏನಯ್ಯ ನಿನ್ನ ಹೆಸರು?

ಮುಂದಾಳು : ಸ್ವಾಮಿ ನನ್ನನ್ನು ಬಸವಯ್ಯ ಅಂತ ಕರೀತಾರೆ. ಇವರ ಕಷ್ಟ, ಪಡೋ ಪಾಡು ನೋಡಿ ಕರುಳು ಚುರ್ ಅಂದದ್ದಕ್ಕೆ ನಾನೂ ಇಲಿಗಳಿಂದ ಅನುಭವಿಸಿದ್ದಕ್ಕೆ ಇವರ ಜೊತೆ ಸೇರಿ ತಮ್ಮ ಮುಂದೆ ಕಷ್ಟ ಹೇಳ್ಕೊಳ್ಳೋಕೆ ಬಂದೆ ಯಜಮಾನ್ರೆ.

ಗೌಡ : ಹಾಗಾದ್ರೆ ಹೀಗೆ ಮಾಡೋಣ.... ಯಾರು ಇಲಿಗಳಿಂದ ನಮ್ಮನ್ನು ಕಾಪಾಡ್ತಾರೋ, ಇಲಿಗಳೇ ಇಲ್ಲದಂತೆ ಮಾಡ್ತಾರೋ ಅವರಿಗೆ ಐದು ಸಾವಿರ ನಾಣ್ಯಗಳನ್ನು ಕೊಡ್ತೀವಿ ಅಂತ ಡಂಗುರ ಹೊಡಿಸಿ ನೋಡೋಣ.

ಜನ : (ತಮ್ಮ ತಮ್ಮಲ್ಲಿ, ಒಳ್ಳೆ ಉಪಾಯ. ಗೌಡರ ಮನಸ್ಸು ದೊಡ್ಡದು. ಹೀಗೆ ಮಾಡಿದರೆ ಯಾರಾದ್ರೂ ಮುಂದೆ ಬಂದೇ ಬರ್ತಾರೆ ಅಂದುಕೊಂಡು ಗೌಡರತ್ತ ತಿರುಗಿ) ದಣಿ, ನಿಮ್ಮ ಮನಸ್ಸು ಬಹಳ ದೊಡ್ಡದು. ನಮ್ಮ ಕಷ್ಟಾನ ಅರ್ಥ ಮಾಡಿಕೊಂಡಿದ್ದೀರಿ. ದೇವರು ನಿಮ್ಮನ್ನು ಚೆನ್ನಾಗಿ ಇಟ್ಟಿರಲಿ. ನಿಮ್ಮ ಮೇಲೆ ಅನ್ಯಾಯವಾಗಿ ಸಿಟ್ಟು ಮಾಡಿಕೊಂಡಿದ್ದೀವಿ.

ಗೌಡ : ಹಾಗಾದ್ರೆ ನೀವೆಲ್ಲ ಈಗ ಮನೆಗೆ ಹೋಗಿ. ನಾನು ಉಳಿದವರನ್ನು, ಅಂದರೆ ಊರಿನ ತಲೆಯಾಳುಗಳನ್ನು ಕರೆಸಿ ಮಾತಾಡಿ ನಿರ್ಧಾರ ತಗೊಂಡು ಆಮೇಲೆ ನಿಮಗೆ ತಿಳಿಸ್ತೀನಿ. ಅವರ ಜೊತೆ ಚರ್ಚೆ ಮಾಡದೆ ಯಾವುದೂ ನಿರ್ಧಾರ ತಗೊಳ್ಳೋದು ಸರಿಹೋಗಲ್ಲ.

* * *

## ದೃಶ್ಯ – 2

**(ಊರಿನ ಚಾವಡಿ, ಒಂದು ಎಂಟು ಹತ್ತು ಜನ ಹಿರಿಯರು, ಪಂಚರು ಎಲ್ಲಾ ಸೇರಿದ್ದಾರೆ. ಮಧ್ಯದಲ್ಲಿ ಗೌಡರು ಕುಳಿತಿದ್ದಾರೆ. ಎಲ್ಲರೂ ಗಂಭೀರವಾದ ಆಲೋಚನೆಯಲ್ಲಿ ತೊಡಗಿದ್ದಾರೆ)**

**ಗೌಡ** : ಹೀಗೆ ತಲೆ ಮೇಲೆ ಕೈ ಹೊತ್ತು ಕೂತರೆ, ಸಮಸ್ಯೆ ಪರಿಹಾರ ಆಗೋಲ್ಲ. ಊರ ತುಂಬಾ ತುಂಬಿಕೊಂಡು ಮಂದಿ ಬದುಕು ಹಾಳು ಗೆಡವಿ, ಸಂಕಟ, ಸಮಸ್ಯೆ ತಂದಿಟ್ಟಿರೋ ಈ ರಾಕ್ಷಸ ಇಲಿಗಳ ಕಾಟದಿಂದ ಜನಾನ ಕಾಪಾಡೋದು ಹ್ಯಾಗೆ ಅಂತ ಯೋಚನೆ ಮಾಡಿ. ಏನ್ಮಾಡಿದರೆ ಇವುಗಳಿಂದ ಮುಕ್ತಿ ಸಿಗುತ್ತೆ ಅದನ್ನಾದರೂ ಹೇಳಿ.

**ಸುಬ್ಬಾಭಟ್ಟ** : ಗೌಡರೇ ಎಷ್ಟು ತಲೆ ಓಡಿಸಿದರೂ ಉಪಾಯ ಹೊಳೀತಾನೇ ಇಲ್ಲ. ಇದಕ್ಕೆ ಇರೋ ಒಂದೇ ಒಂದು ದಾರಿ ಅಂದ್ರೆ ಬೆಂಕಿ ಹಾಕಿ ಮೂಷಕ ಯಜ್ಞ ಮಾಡಿ ಬಿಡೋಣ.

**ತಿಮ್ಮೇಗೌಡ** : ಒಳ್ಳೇ ಸಲಹೆ ಕೊಟ್ಟಿರಿ ಭಟ್ಟರೆ. ಬೆಂಕಿ ಹಾಕಿ ಊರನ್ನೇ ಸುಡೋ ಯೋಚನೆ ಮಾಡಿದ್ದೀರಾ ಹೇಗೆ? ಅವುಗಳಿಗೆ ಬೆಂಕಿ ಹಾಕಿದರೆ ನಮ್ಮ ಮನೇ ಮಠ ಮಂದಿ ಮಾರು

ಎಲ್ಲಾ ಅವುಗಳ ಜೊತೆಗೇ ಆಹುತಿ ಆಗುತ್ತೆ. ಅಗ್ನಿ ದೇವರ ಬಾಯಿಗೆ ನಾವೂ ಒಳ್ಳೇ ರಸಕವಳ ಆಗ್ತೀವಿ.

ಸುಬ್ಬಾಭಟ್ಟ : ಹಾಗಾದರೆ ಏನ್ಮಾಡಬೇಕು, ನೀವೇ ಹೇಳಿ.

ತಿಮ್ಮೇಗೌಡ : ನನಗನಿಸುತ್ತೆ, ಇಂತಹ ಪರಿಸ್ಥಿತಿಯಲ್ಲಿ ಊರು ಬಿಟ್ಟು ಹೋಗೋದೇ ಎಲ್ಲರಿಗೂ ಕ್ಷೇಮ.

ಗೌಡ : ಊರು ಬಿಟ್ಟು ಹೋಗೋದೇ? ಸಾಧ್ಯಾನೇ ಇಲ್ಲ. ಇಲ್ಲಿರೋದೆಲ್ಲ ಬಿಟ್ಟು, ಅಲ್ಲಿ ಹೋಗಿ ಬದುಕೋದು ಹೇಗೆ? ಇಲಿಗಳು ಸಾಮ್ರಾಜ್ಯ ಆಳಿಕೊಂಡು ಇರಲೀಂತ ಬಿಟ್ಟು ಬಿಡೋದೆ?

ಹಿರಿಯರು : ಹೋಗಲಿ ಬಿಡಿ. ಯಾವುದೂ ಉಪಾಯ ಹೊಳೀಲಿಲ್ಲಾಂದ್ರೆ, ದೇವರ ಮೇಲೆ ಭಾರ ಹಾಕಿ, ಬರೋದನ್ನೆಲ್ಲ ಅನುಭವಿಸೋಣ.

ಗೌಡ : ಇಷ್ಟೊಂದು ನಿರಾಶರಾಗೊದು ಬೇಡ. ನಾನು ಇದಕ್ಕೆ ಒಂದು ಉಪಾಯ ಆಲೋಚಿಸಿದ್ದೀನಿ. ದುಡ್ಡಿನ ಆಸೆ ತೋರಿಸಿದರೆ ಯಾರಾದರೂ, ಎಂಥಾ ಕೆಲಸಕ್ಕಾದರೂ ಮುಂದೆ ಬರ್ತಾರೆ, ಅದಕ್ಕೆ ನಾನು ಹೇಳ್ತಿದ್ದೀನಿ ಇಲಿಗಳನ್ನು ಕೊಂದು ನಮ್ಮನ್ನೆಲ್ಲ ಅವುಗಳ ಕಾಟದಿಂದ ಯಾರು ಪಾರು ಮಾಡ್ತಾರೋ ಅವರಿಗೆ ಐದು ಸಾವಿರ ನಾಣ್ಯಗಳನ್ನು ಕೊಡ್ತೀನಿ.

ಎಲ್ಲರೂ : (ಆಶ್ಚರ್ಯಚಕಿತರಾಗಿ) ಹಾಂ! ಐದು ಸಾವಿರ ನಾಣ್ಯಗಳೇ!! ಇದು ದುಬಾರಿಯಾಯ್ತು.

ಗೌಡ : ಸ್ವಾಮಿ ನೀವೆಲ್ಲ ಹೀಗೆ ಬಾಯಿ ಬಿಡೋದರಲ್ಲಿ ಆಶ್ಚರ್ಯ ಏನೂಇಲ್ಲವಾದರೂ, ದುಡ್ಡಿನ ಆಸೆ ತೋರಿಸದಿದ್ದರೆ ಇಂತಹ ಪ್ರಚಂಡ ಕೆಲಸಕ್ಕೆ ಯಾರೂ ಬರೊಲ್ಲ. ಮೊದಲು ಯಾರಾದರೂ ಬರ್ತಾರಾ ನೋಡೋಣ. ಕೆಲಸ ಆಗಲಿ. ಮುಂದಿನ ಮಾತು ಆಮೇಲೆ.

**ಎಲ್ಲರೂ** : ಓ ಹಾಗೋ!! ಹಾಗಾದ್ರೆ ನೀವು ಹೇಳಿದಂತೆಯೇ ಆಗಲಿ. ಕೂಡಲೇ ಡಂಗುರ ಹೊಡೆಸಿ. ಹೇಗಿದ್ದರೂ ನಮ್ಮ ಡಂಗುರದ ಮಾದಣ್ಣ ಇದ್ದಾನಲ್ಲ.

**ಗೌಡ** : ಆಯ್ತು ಈಗಲೇ ಅವನನ್ನು ಕರೆಸಿ ಡಂಗುರ ಹೊಡೆಸುತ್ತೇನೆ. ಇನ್ನು ನಾವು ನಮ್ಮ ನಮ್ಮ ಮನೆಗಳಿಗೆ ಹೋಗೋಣ. ಮತ್ತೆ ನಾಳೆ ಸಭೆ ಸೇರಿ, ನಮ್ಮ ಕೆಲಸ ಎಲ್ಲೀವರೆಗೆ ಬಂತು ನೋಡೋಣ. ಆಗ್ಬಹುದಲ್ಲ.
**(ಎಲ್ಲರೂ ಎದ್ದು ಹೊರಡಲು ಅನುವಾಗುವರು. ಬೆಳಕು ಮಂದವಾಗುತ್ತದೆ)**

* * *

## ದೃಶ್ಯ – 3

**(ನಾಲ್ಕೂ ಬೀದಿಗಳೂ ಸೇರುವ ಚೌಕ. ಡಂಗುರ ಬಾರಿಸುತ್ತಾ, ಡಂಗುರದ ಮಾದಯ್ಯನ ಪ್ರವೇಶ. ಡಂಗುರದ ಸದ್ದಿಗೆ ಮಕ್ಕಳು, ಹಿರಿಯರು, ಕಿರಿಯರು ಕೆಲವರು ಹೆಂಗಸರೂ ಬೇರೆ ಬೇರೆ ಕಡೆಯಿಂದ ಬಂದು ಗುಂಪು ಸೇರುತ್ತಾರೆ.)**

**ಡಂಗುರದವ** : ಕೇಳ್ರಪೊ ಕೇಳ್ರಿ. ಬೊಮ್ಮನ ಅಳ್ಳಿ ಮಂದಿ ಎಲ್ಲಾ ಕೇಳ್ರಿ. ಈ ಅಳ್ಳೀಲಿ ಎಚ್ಚಾಗಿರೋ ಇಲಿಗಳ ಕಾಟ ನೋಡಿ ಗೌಡ್ರು, ಯಾರು ಇಲಿಗಳನ್ನು ಕೊಲ್ತಾರೋ ಅವಯ್ಯನಿಗೆ ಐದು ಸಾವ್ರ ನಾಣ್ಯ ಕೊಡ್ತಾರಂತಪೊ.... ನಿಮ್ಮಲ್ಲಿ ಯಾರಾದರೂ ಮುಂದಾಗಿ ಬರೋದಾದ್ರೆ ಸೈ. ಗೌಡ್ರತಾವಕೆ ಓಗಿ ಮಾತಾಡ್ಬೌದು.

**(ಅಷ್ಟರಲ್ಲಿ ಕಿಂದರಿ ಸದ್ದು ಕೇಳಿಸುತ್ತೆ. ಜನ ಆ ಸದ್ದು ಬರುವ ದಿಕ್ಕಿಗೆ ನೋಡುತ್ತಾರೆ)**

**ಹಾಡು** : ಇದೊ ಇದೊ ಬಂದನು
ಕಿಂದರಿ ಜೋಗಿ
ಜೋಗಿಯಲ್ಲವಿವ
ಮನ್ಮಥ ಭೋಗಿ
ನೋಡಲು ನೋಡಲು
ಬಲು ಬಲು ಸುಂದರ

ನುಡಿಸುವ ಕಿಂದರಿ
ಕೇಳಲು ಮಧುರ
ಮೈಯ ಮಾಟವೋ
ಕಣ್ಣ ನೋಟವೋ
ಹೊಳಪು ಬಿಳುಪುಗಳ
ಮಿಂಚು ಕೂಟವೋ
ನುಡಿಸುವ ಕಿಂದರಿ
ಯಿಂದಲೆ ಸ್ವರಗಳು
ಸವಿಯ ಹೊಮ್ಮಿಸುತ
ಧುಮುಧುಮುಕಿದವು
ನೆರೆದ ಮಂದಿಯ ಮನ
ಬೆರಗಾದವು! ಮಾತು ಮರೆತವು
ಯಾವ ಲೋಕದಿಂ
ಬಂದನೊ ಇವನು
ದಿಟ ದಿಟ ಇವನಹ
ಕಿನ್ನರ ಲೋಕದ ದೇವದೂತನು
ನಮ್ಮ ಅಳಲನು ಆರಿಸಲೆಂದು
ಬೇಗೆ ಬವಣೆಗಳ ತೀರಿಸಲೆಂದು
ಬಂದಿಹನಹನು ಬಂದಿಹನಹನು
ಎನುತಮಂದಿಯು
ಮುದದಲಿ ನಲಿದು
ಬಾ ಬಾ ಕಿಂದರಿ ಜೋಗಿಯೆ ಬಾ
ನಮ್ಮೂರಿನ ರಕ್ಷೆಗೆ
ಬೇಗದಿ ಬಾರ್‍ಯೆ ಗೌಡರ ಕಾಣ್ಕೆ
ಗೌಡರ ಕಾಣ್ಕೆ
(ಜನ ಅವನ ಸುತ್ತ ನೆರೆಯುತ್ತಾರೆ)

ಕಿಂದರಿಜೋಗಿ: ಗೆಳೆಯರೆ ದುಗುಡವ
ಅರಿತಿಹೆನು ಗೌಡರ
ಕಾಣಲು ಬಂದಿಹೆನು
ಬನ್ನಿರಿ ಕೂಡಿ ಸಾಗುವ ಅಲ್ಲಿಗೆ
ನುಡಿಸಿ ಷರತನು
ತಿಳಿಯುವ ಮೆಲ್ಲಗೆ

ಜನರೆಲ್ಲ : ಬಾರಯ್ಯ ಬಾ ಮಹಾನುಭಾವ. ಆಪತ್ಬಾಂಧವ. ಆದಷ್ಟು ಬೇಗ ಗೌಡರನ್ನು ಮಾತಾಡಿಸಿ ನಮ್ಮನ್ನು ಆ ಮೃತ್ಯು ರೂಪದ ಇಲಿಗಳಿಂದ ಕಾಪಾಡಯ್ಯ.
**(ಎಂದು ಹೇಳುತ್ತಾ ಕಿಂದರಿ ಜೋಗಿಗೆ ದಾರಿ ತೋರಿಸುತ್ತಾ ಸಾಗುತ್ತಾರೆ.)**

* * *

## ದೃಶ್ಯ – 4

**(ಚಾವಡಿಯಲ್ಲಿ ಗೌಡರು ಊರ ಹಿರಿಯರ ಜೊತೆ ಕುಳಿತಿದ್ದಾರೆ. ಮುಖದಲ್ಲಿ ಚಿಂತೆ ಮೊದಲಿನ ಹಾಗೆ ಕಾಣುತ್ತಿದೆ.)**

**ಜನ** : (ಪ್ರವೇಶಿಸಿ) ಯಜಮಾನರೇ, ಯಜಮಾನರೇ ನಮ್ಮ ಅದೃಷ್ಟ ಕೂಡಿ ಬಂತು. ಈ ಕಿಂದರಿಜೋಗಿ ಬೇರೆ ಯಾವುದೋ ಲೋಕದಿಂದ ಬಂದಿದ್ದಾನೆ. ಸುಂದರವಾಗಿ ಕಿಂದರಿ ನುಡಿಸುತ್ತಾನೆ.

**ಗೌಡರು** : (ಸ್ವಲ್ಪ ಸಿಟ್ಟಿನಿಂದ) ನಿಮಗೇನು ಹುಚ್ಚು ಗಿಚ್ಚು ಹಿಡಿದಿದೆಯೋ ಹೇಗೆ? ಇಲಿಗಳನ್ನ ಕೊಲ್ಲೋಕೆ ಕತ್ತಿ, ಕಠಾರಿ, ಔಷಧಿ ಬೇಕೆ ಹೊರತು ಕಿಂದರಿ ಅಲ್ಲ. ನಮಗೇನು ಇಲ್ಲಿ ಕಛೇರಿ ಮಾಡಬೇಕಾಗಿದೆಯೇ? ಕಿಂದರಿ ನುಡಿಸಿ ಹಾಡುವವನನ್ನು ಕರ್‍ಕೊಂಡು ಬಂದಿದ್ದೀರಿ. ನಿಮ್ಮ ಬುದ್ಧಿಗೆ ಅಷ್ಟು ಬೆಂಕಿ ಹಾಕ!

**ಕಿಂದರಿಜೋಗಿ**: ಸ್ವಾಮಿ, ಹೀಗೆಲ್ಲಾ ಸಿಟ್ಟಲ್ಲಿ ಮಾತಾಡೋದು ಸರಿ ಅಲ್ಲ. ನೀವು ನನ್ನನ್ನು ಏನೂಂತ ತಿಳ್ಕೊಳ್ಳೋಕೆ ಹೋಗ್ದೆ ಬಡಪಾಯಿಗಳ ಮೇಲೆ ರೇಗಾಡ್ತಿದ್ದೀರಿ.

ಗೌಡ : ಹೌದಯ್ಯ ಹೌದು. ನಾನು ರೇಗಾಡ್ತಿದ್ದೀನಿ ನಿಜ. ಈಗ ನೀನು ಹೇಳು, ನೀನೇನು ಮಹಾ ಆಗಿದ್ದೀಯಾಂತ? ಯಾರೂಂತ! ಎಲ್ಲಿಂದ ಬಂದಿದ್ದೀ ಅಂತ?

ಕಿಂದರಿಜೋಗಿ: ಸ್ವಾಮಿ ಗೌಡರೇ ನಾನು ಕಿಂದರಿ ಜೋಗಿ. ತಪಸ್ಸು ಮಾಡಿ ಕಿಂದರಿ ಬಾರಿಸುವ ಕಲೆಯನ್ನು ಶಿವನ ಬಂಟನಾದ ಭೃಂಗಿಯಿಂದ ಕಲಿತಿದ್ದೀನಿ. ಶಿವನ ಅನುಗ್ರಹದಿಂದ ನನಗೆ ನನ್ನ ಕಿಂದರಿಗೆ ಅಲೌಕಿಕ ಶಕ್ತಿ ಲಭಿಸಿದೆ. ನಾನು ನುಡಿದರೆ ಕಿನ್ನರ ಲೋಕವೆ ಬೆಚ್ಚಿ ಬೀಳುತ್ತದೆ. ಇದಕ್ಕೆ ಮಾಂತ್ರಿಕ ಶಕ್ತಿಯಿದೆ. ಕಿಂದರಿಗೆ ಬೆರಳು ಹಚ್ಚಿದರೆ ಸಾಕು, ಅದ್ಭುತ ಲೋಕಗಳು ತೆರೆದುಕೊಳ್ಳುತ್ತವೆ. ಪಶು ಪಕ್ಷಿ ಪ್ರಾಣಿ ಮನುಷ್ಯರು ಯಾರೇ ಆದರೂ ನನ್ನ ಹಿಂದೆ ಬರಲೇಬೇಕು. ಅಂತಹ ಆಕರ್ಷಕ ಶಕ್ತಿ ಇದೆ. ನನ್ನ ಕಿಂದರಿಗೆ ನಿಮ್ಮ ಇಲಿಗಳೇನು ಮಹಾ!

ಗೌಡ : ಆಯ್ತಯ್ಯ. ನಿನ್ನ ಮಾತುಗಳನ್ನು ನಂಬ್ತೇನೆ.

ಕಿಂದರಿಜೋಗಿ: ಹಾಗಾದರೆ ನಿಮ್ಮ ಷರತ್ತು?

ಗೌಡ : ನೋಡಪ್ಪಾ ಒಂದು ಬಿಡದಂತೆ ಇಲಿಗಳನ್ನು ಮುಗಿಸಿಬಿಟ್ಟೆ ಅಂದ್ರೆ ಐದು ಸಾವಿರ ನಾಣ್ಯಗಳನ್ನು ಕೊಡ್ತೇನೆ. ನಿನ್ನ ಕೆಲಸ ನನ್ನ ಮನಸಿಗೆ ಬಂದರೆ, ಮೇಲೆ ಇನ್ನೂ ಒಂದು ಸಾವಿರ ಕೊಡ್ತೇನೆ. ದಯವಿಟ್ಟು ಈ ಕೆಲಸ ಮಾಡಿ ಪುಣ್ಯಕಟ್ಟಿಕೋ ಮಹಾನುಭಾವ. ಬೇಕಾದರೆ ಈ ಊರನ್ನೇ ನಿನಗೆ ಒಪ್ಪಿಸಿ ಬಿಡ್ತೇವೆ.

ಕಿಂದರಿಜೋಗಿ: ಬೇಡ, ಬೇಡ ಸ್ವಾಮಿ. ನಾನೇನೂ ಅಷ್ಟು ದುರಾಸೆಯವನಲ್ಲ. ಏನೋ ನಿಮ್ಮ ಗೋಳು ಆ ಶಿವನ ಕಿವಿ ಮುಟ್ಟಿರಬೇಕು. ನನ್ನ ಕನಸಿನಲ್ಲಿ ಕಾಣಿಸಿಕೊಂಡು

ಇಲ್ಲಿಗೆ ಹೋಗು ಎಂದ. ಸರಿ. ಒಳ್ಳೆ ಕೆಲಸ. ಊರಿಗೆ ಉಪಕಾರ ಮಾಡಿದ ಹಾಗೆ ಆಗುತ್ತೆ ಅಂತ ಬಂದೆ. ಇಲ್ಲೀವರೆಗೆ ಎಷ್ಟೊಂದು ಇಲಿಗಳನ್ನು ಕೊಂದಿದ್ದೇನೋ ನನಗೇ ಲೆಕ್ಕವಿಲ್ಲ. ಎಲ್ಲಿ ಇಲಿಗಳ ಕಾಟವೆಂದರೆ ಅಲ್ಲಿ ನಾನೇ ಹಾಜರ್, ಬ್ರಹ್ಮ, ವಿಷ್ಣು, ಮಹೇಶ್ವರರಿಗೂ ಬಹುಶಃ ಈ ಮೂಷಿಕಾಕ್ರಮಣ ತಡೆಯೋಕೆ ಸಾಧ್ಯವಾಗೊಲ್ಲ. ಆದರೆ ನಾನು ಅವರಿಗೂ ಸಹಾಯ ಮಾಡಬಲ್ಲೆ.

**ಗೌಡ** : ಆಯ್ತಾಯ್ತು ಮಹಾನುಭಾವ. ನಿನ್ನ ಪ್ರತಾಪವನ್ನು ಮಾತಿನಲ್ಲೇ ಬರಿದು ಮಾಡಬೇಡ. ಮೊದಲು ಕೆಲಸ ಮುಗಿಸು, ನಮ್ಮೂರಿನ ಇಲಿಗಳಿಗೊಂದು ಗತಿ ಕಾಣಿಸು. ಮಾತಿನ ಶೂರತ್ವ ಅರ್ಥ ಮಾಡಿಕೊಂಡಿದ್ದೇವೆ. ನಿನ್ನ ಕೆಲಸದ ಶೂರತ್ವಾನ ಬೇಗ ತೋರಿಸು.

**ಕಿಂದರಿಜೋಗಿ**: ಆಯ್ತು ಹಿರಿಯರೇ, ನೀವು ಹೇಳಿದ ಹಾಗೆ ಒಂದು ಇಲಿಯ ನೆರಳೂ ಉಳಿಯದ ಹಾಗೆ ಮಾಡ್ತೀನಿ. ಆದರೆ ಒಂದು ಎಚ್ಚರಿಕೆ, ಮಕ್ಕಳು ಯಾರೂ ಹೊರಗೆ ಬರಬಾರದು. ಅವರನ್ನು ಒಳಗೇ ಕೂಡಿ ಹಾಕಿ. ಇಲ್ಲವಾದಲ್ಲಿ ಅವರೂ ಇಲಿಗಳ ಜೊತೆ ಜೊತೆಗೇ ಬಂದು ಬಿಡ್ತಾರೆ ಮತ್ತು ಜೊತೆಗೇನೇ ಸಾಯ್ತಾರೆ.

**ಹಿರಿಯರು** : ಸದ್ಯ ಮಾರಾಯ ಮಕ್ಕಳಿಗೆ ಆ ಗತಿ ಕಾಣಿಸಬೇಡ. ನಮಗೆ ಬೇಕಾಗಿರೋದು ಇಲಿಗಳ ಸಾವು ಹೊರತು ಮಕ್ಕಳದಲ್ಲ. ಸರಿ, ಮಾತಲ್ಲೇ ಮುಗಿಸಿಬಿಡಬೇಡ. ನಡಿ ಕೆಲಸಕ್ಕೆ ಶುರು ಹಚ್ಕೋ.

* * *

## ದೃಶ್ಯ – 5

(ಮೇಳ 2 ಭಾಗಗಳಲ್ಲಿ ಎಡಬದಿಗೆ ಬಲಬದಿಗೆ ನಿಂತಿದೆ. ಹಿಂದಿನಿಂದ ಕಿಂದರಿ ನಾದ ಕೇಳಿಸುತ್ತದೆ. ಸ್ವಲ್ಪ ಹೊತ್ತು ಮೇಳದವರು ಸುತ್ತ ಕಣ್ಣಾಡಿಸಿ ತಮ್ಮ ತಮ್ಮ ಪಾರ್ಶ್ವಗಳನ್ನು ನೋಡುತ್ತಾರೆ)

**ಎಡ ಮೇಳ** : ಏನಿದು ಏನಿದು ನಾದವಿದೆಲ್ಲಿ
ಪದ್ಯದ ಇನಿದನಿ
ಸವಿದನಿ
ಮೋಡಿಯ ತೆರದಿಲಿ
ಮನಗಳ ತೂಗಿದೆ
ಮೈಗಳ ಮರೆಸಿದೆ
ಕಿಂದರಿ ಕೈಯಲಿ
ಹಿಡಿದಹನಾರೋ
ಇತ್ತಲೆ ಬರುತಿಹ ಹಿಂದೆ ಅದಾರೋ.

**ಬಲ ಮೇಳ** : (ಎಡಮೇಳ ಹೇಳಿದ ದಿಕ್ಕಿನತ್ತ ತಿರುಗಿ)
ಅರೆ ಅರೆ ಹಿಂದೆ ಬರುತಿಹರು
ಹಿಂಡು ಹಿಂಡಲಿ ತುಂಬಿಹರು
ನೋಡಿದರವರು ಜನರಂತಿಲ್ಲ
ಪಿಲ ಪಿಲ ಬಳ ಬಳ ಬರುತಿಹವೆಲ್ಲ

ಆಹಾ! ಅವುಗಳು ಬೇರೇನಲ್ಲ
ಇಲಿಗಳು ಇಲಿಗಳು ತುಂಬಿಹವು
ಓಡುತ ಹಾರುತ ಕುಣಿಯುತ ಕೆನೆಯುತ
ಸಂಭ್ರಮದಲಿ ಜೋಗಿಯ ಹಿಂದೆ
ನೂಕುತ ನುಗ್ಗುತ ಸ್ಪರ್ಧಿಸಿ ಮುಂಥೆ

**ಎಡ ಮೇಳ** : ಏನಿದು ಏನಿದು ಅಚ್ಚರಿಯು
ಪ್ರಳಯ ಜಲದೊಳು ಉಕ್ಕಿ ಹರಿದಿವೆ
ಜಗವೇ ತಮದೆಂದೆನುತ ಮೆರೆದಿವೆ
ಸಣ್ಣಿಲಿ, ದೊಡ್ಡಿಲಿ, ಮೂಗಿಲಿ
ಸೊಂಡಿಲಿ, ಕರಿಯಿಲಿ, ಬಿಳಿಯಿಲಿ
ಬಣ್ಣ ಬಣ್ಣದ ವಿವಿಧ ಗಾತ್ರದ
ಇಲಿಗಳ ಹಿಂಡದು ನುಗ್ಗಿ ಬರುತಿದೆ
ಕಿಂದರಿ ನಾದಕೆ ನಲಿದು ಒಲಿದಿವೆ

**ಬಲ ಮೇಳ** : ಅಲ್ಲಿಗೆ ಜೋಗಿಯು ಕರೆದೊಯ್ಯುವನೋ
ಕರೆದೊಯ್ಯುವನೋ
ಇಲಿಗಳನ್ನೆಲ್ಲ ಏನ ಮಾಡುವನೋ
ಕೇಳಲೇ ಬೇಕು, ಹೇಳುವರಾರು?
**(ಅತ್ತ ಇತ್ತ ನೋಡುವರು. ಅಷ್ಟರಲ್ಲಿ ನಾಲ್ಕು ಜನ ಮಾತಾಡಿಕೊಳ್ಳುತ್ತಾ ಬರುವರು)**

**ಮೇಳದವರು** : ಅಯ್ಯ ನೀವೆಲ್ಲ ಎಲ್ಲಿಂದ ಬರುತ್ತಿದ್ದೀರಿ? ನಿಮ್ಮ ಮುಖದಲ್ಲಿ ಏನೋ ಸಂತೋಷ ಕಾಣ್ತಿದೆ.

**1ನೇ ವ್ಯಕ್ತಿ** : ಯಾಕೆ ಅಣ್ಣಂದಿರೆ. ನಿಮಗೆ ವಿಷಯ ಏನೂಂತಲೇ ಗೊತ್ತಿಲ್ವೆ. ನಮ್ಮೂರಿನ ಇಲಿಗಳ ಕತೆ ಗೊತ್ತಿಲ್ವೇನು?

**ಮೇಳದವರು** : ಇಲಿಗಳ ಕತೆ ಗೊತ್ತಿಲ್ಲ. ಆದರೆ ಈಗ ತಾನೇ ಹಿಂಡು ಹಿಂಡು ಇಲಿಗಳು ಕಿಂದರಿ ಜೋಗಿಯೊಬ್ಬನ ಹಿಂದೆ ಹೋದದ್ದನ್ನು ನೋಡಿದೆವು. ನಮಗೆ ಅದೇ

ಆಶ್ಚರ್ಯವಾದದ್ದು. ಅವನ ಹಿಂದೆ ಇಲಿಗಳು ಹೋದದ್ದೇಕೆ, ಹೋದದ್ದಾದರೂ ಎಲ್ಲಿಗೆ? ಅದೇ ನಮಗೆ ತಿಳೀತಿಲ್ಲ.

**2ನೇ ವ್ಯಕ್ತಿ** : ಸ್ವಾಮಿ ಆ ಇಲಿಗಳ ಸಂಹಾರ ಮಾಡಿಸಬೇಕಂತಲೇ ಆತನನ್ನು ಕರೆಸಿದ್ದು. ಅವನ ಕಿಂದರಿ ಮೋಡಿಗೆ ಬಿದ್ದು ಅವನ ಹಿಂದೆ ಇಲಿಗಳು ಹೋದವು. ಆ ಜೋಗಣ್ಣ ಕಿಂದರಿ ನುಡಿಸ್ತಾ ನುಡಿಸ್ತಾ ಅವುಗಳನ್ನೆಲ್ಲ ಕರಸ್ಕೊಂಡು ನದಿ ಕಡೆಗೆ ನಡೆದ. ಪೆದ್ದು ಇಲಿಗಳಿಗೆ ತಾವು ಎಲ್ಲಿ ಹೋಗ್ತಿವೆ ಅನ್ನೋದೇ ಗೊತ್ತಾಗದೆ ನೀರಲ್ಲಿ ಇಳಿದು ಮುಳುಗಿ ಸತ್ತು ಹೋದವು. ಹೆಣಗಳಾಗಿ ತೇಲಾಡಿದವು.

**3ನೇ ವ್ಯಕ್ತಿ** : ಅದಕ್ಕೇ ನಮಗೆ ಈ ಪಾಟೀ ಸಂತೋಷ. ಇನ್ನೂ ಮಂದಿ ಎಲ್ಲಾ ಜಯಕಾರ ಮಾಡ್ತಾ ಬತ್ತಾವ್ರೆ. ಎಷ್ಟೋ ದಿವ್ಸದಿಂದ ಸತ್ತು ಸುಣ್ಣಾಗಿದ್ದ ಜನಕ್ಕೆ ಪ್ರಾಣ ಬಂದಾಂಗಾಯ್ತು.

**4ನೇ ವ್ಯಕ್ತಿ** : ಬನ್ರಯ್ಯ ನೀವೂ ನಂಜೊತೆ ಊರ್ನಲ್ಲಿ ಮಾಡ್ಕೋಳ್ಳೊ ಹಬ್ಬದಲ್ಲಿ ಸೇರ್ಕೊಳ್ಳಿ ಕಿಂದರಿಜೋಗಿಯ ಮೋಡಿ ನೋಡಿ ಖುಷಿ ಪಟ್ಟ ಮಂದಿ ಹಾಡೇಳ್ತಾ ಬರ್ತಾವ್ರೆ.

**ಜನರ ಗುಂಪು:** ಏನಧ್ಭುತ ಈ ಜೋಗಿಯದು
ಕಿಂದರಿ ನುಡಿಸಿರೆ ನಾದಕೆ ಮಿಗಿಲು
ಪರಿಪರಿ ಸವಿಗಳನುಣ್ಣುವ ಬಯಕೆ
ಎಲ್ಲೆಲ್ಲೂ ಸವಿತಿನಿಸಿನ ರಾಶಿ
ನೀರೂರಿಸುವ ಪಾಕಗಳು
ಬಗೆ ಬಗೆ ತಿನಿಸಿನ ತಟ್ಟೆಗಳು
ಬಾಬಾ ಎನ್ನುತ ಕರೆದವು ನಮ್ಮ
ಹೋದರಲ್ಲಿಗೆ ಬರಿಭ್ರಮೆಯೋ ತಮ್ಮ!!
ಆದರೂ ಜೋಗಿಯ ಮಾಯೆಯಲಿ

ಬೆರಗೊ ಬೆರಗು ತುಂಬಿಹುದಲ್ಲ
ಬನ್ನಿರಿ ಬನ್ನಿರಿ ಬಳಿ ಸಾಗೋಣ
ಗೌಡರ ಕಂಡದ್ಭುತ ತಿಳಿಸೋಣ.

**ಎಂದು ಸಾಗುವರು. ಮೇಳಗಳೂ ಎಲ್ಲರನ್ನೂ ಹಿಂಬಾಲಿಸಿ ಹೋಗುವರು.**

* * *

## ದೃಶ್ಯ – 6

(ಗೌಡರು ಚಾವಡಿಯಲ್ಲಿ ಕುಳಿತಿದ್ದಾರೆ. ಸಾಕಷ್ಟು ಮಂದಿ ಅವನ ಸುತ್ತಲೂ ನೆರೆದಿದ್ದಾರೆ. ಅವರ ಮುಂದೆ ಕಿಂದರಿಜೋಗಿ ಕಾಣಿಸಿಕೊಳ್ಳುತ್ತಾನೆ.)

ಕಿಂದರಿಜೋಗಿ: ಗೌಡರೇ, ನನ್ನ ಮಾತಿನಂತೆ ನಾನು ನಿಮ್ಮೂರಿನ ಇಲಿಗಳನ್ನು ಸಂಹರಿಸಿದ್ದೇನೆ. ಇನ್ನು ನಿಮಗೆ ಇಲಿಗಳಿಂದ ಯಾವ ತೊಂದರೆಯೂ ಇಲ್ಲ. ನೀವೆಲ್ಲ ನಿರಾತಂಕವಾಗಿ ಇರಬಹುದು. ದಯವಿಟ್ಟು ನೀವು ಮಾತುಕೊಟ್ಟಂತೆ ಆರು ಸಾವಿರ ನಾಣ್ಯಗಳನ್ನು ಕೊಟ್ಟು ಬಿಡಿ.

ಗೌಡ : (ಆಶ್ಚರ್ಯದಿಂದ) ಏನು ಆರು ಸಾವಿರ ನಾಣ್ಯಗಳೇ! ನೀನು ಮಾಡಿರುವ ಜುಜುಬಿ ಕೆಲಸಕ್ಕೆ ಆರು ಸಾವಿರ ಕೊಡಬೇಕೆ? ನೀನು ಮಾಡಿದ್ದೇನು, ಮಹಾ ಘನಕಾರ್ಯ! ಸುಮ್ಮನೆ ನಿನಗೋಸ್ಕರ ನೀನು ಕಿಂದರಿ ಬಾರಿಸಿಕೊಂಡೆ. ಇಲಿಗಳು ತಮ್ಮ ತಾವೇ ಹೋಗಿ ನೀರಲ್ಲಿ ಬಿದ್ದವು. ನೀನೇನು ಕತ್ತಿ, ಕಠಾರಿ ಹಿಡ್ಕೊಂಡು ಯುದ್ಧ ಮಾಡಿದೆಯಾ? ಕಷ್ಟಪಟ್ಟು ಊರೆಲ್ಲಾ ಹುಡುಕಾಡಿ ಇಲಿಗಳನ್ನ ಎಳ್ಕೊಂಡು ಬಂದೆಯಾ....? ಹೋಗಯ್ಯಾ

ಹೋಗು ಸಾವಿರಾರು ನಾಣ್ಯ ಕೊಡೋಕೆ ನಿಮ್ಮಪ್ಪನ ಗಂಟೇನು ಮಡಗಿದ್ದೀಯ?

**ಕಿಂದರಿಜೋಗಿ:** ಯಜಮಾನ್ರೇ ನೀವು ಮಾಡ್ತಿರೋದು ಸರಿ ಅಲ್ಲ. ಕೊಟ್ಟ ಮಾತು ಉಳಿಸಿಕೊಳ್ಳೋದು ನಿಮ್ಮ ಧರ್ಮ.

**ಗೌಡ** : ಹೋಗಲೋ ಜೋಗಿ, ನನ್ನನ್ನು ಯಾರೂಂತ ತಿಳ್ಕೊಂಡಿದ್ದೀಯ! ನಾನು ಈ ಊರಿನ ಪಟೇಲ. ಅಂದ್ರೆ ದೊರೆ ಇದ್ದ ಹಾಗೆ. ನನ್ನ ಮಾತೇ ಕೊನೆ. ಆದ್ದರಿಂದ ಯಾರ ಹತ್ತಿರವೂ ನಿನ್ನ ದೂರುನಡೆಯೊಲ್ಲ. ಆಯ್ತು ಪಾಪಾಂತ ತಗೋ ಈ ನಾಲ್ಕು ಕಾಸು ಕೊಡ್ತೀನಿ. ಎತ್ಕೊಂಡು ಜಾಗ ಖಾಲಿ ಮಾಡು. ಬಾಲ ಬಿಚ್ಚಿದರೆ ಸಿಗಿದು ತೋರಣ ಕಟ್ಟಿ ಬಿಡ್ತೀನಿ.

**ಕಿಂದರಿಜೋಗಿ:** ಗೌಡ, ಬೇಡ. ನೀನು ಮಾಡೋ ತಪ್ಪಿಗೆ ದೊಡ್ಡ ದಂಡ ತೆರಬೇಕಾಗುತ್ತೆ. ಊರಿಗೆ ಊರೇ ಅನುಭವಿಸಬೇಕಾಗುತ್ತೆ. ಊರು ಊರಾಗಿರೊಲ್ಲ; ಸ್ಮಶಾನವಾಗಿ ಬಿಡುತ್ತೆ ಎಚ್ಚರಿಕೆಯಿರಲಿ.

**ಹಿರಿಯರು** : (ಪಿಸು ದನಿಯಲ್ಲಿ) ಗೌಡರೇ, ಜೋಗಿ ಮಾತು ಕೇಳಿಸಿಕೊಳ್ಳಿ. ಅವನಿಗೆ ಕೊಡಬೇಕಾದ್ದನ್ನು ಕೊಟ್ಟು ಬಿಡಿ. ನಾಳೆ ಹೆಚ್ಚು ಕಡಿಮೆ ಆದರೆ ನಾವೆಲ್ಲ ಅನುಭವಿಸಬೇಕಾಗುತ್ತೆ.

**ಗೌಡ** : ನಾನು ಇದಕ್ಕೆಲ್ಲ ಹೆದರೋವ್ನಲ್ಲ. ನಿಮ್ಮ ಹತ್ತಿರ ಹಣ ಇದ್ದರೆ ನೀವು ಕೊಡಿ. ನನ್ನಿಂದ ಒಂದು ಕಾಸೂ ಹುಟ್ಟೊಲ್ಲ.

**ಹಿರಿಯರು** : (ಹತಾಶರಾಗಿ) ದೇವರೇ ಏನಾಗುತ್ತೋ ಏನೋ!!

**ಕಿಂದರಿಜೋಗಿ:** ಗೌಡರೇ ಕಡೇ ಸಾರಿ ಕೇಳ್ತಾ ಇದ್ದೀನಿ. ಕೊಡ್ತೀರೋ ಇಲ್ವೋ? ಕೊಡಲಿಲ್ಲಾಂದ್ರೆ ಈಗಲೂ ಹೇಳ್ತೀನಿ, ಪರಿಣಾಮ ನೆಟ್ಟಗಾಗೊಲ್ಲ.

ಗೌಡ : ಲೋ ಜೋಗಯ್ಯ... ಹೋಗಯ್ಯ ಹೋಗು. ನೀನು ಏನ್ಮಾಡ್ಕೋತೀಯೋ ಮಾಡ್ಕೋ ಹೋಗು. ನಿನ್ನ ಬೆದರಿಕೆಗಳಿಗೆ ನಾನುಹೆದರುವವನಲ್ಲ.

ಕಿಂದರಿಜೋಗಿ: ಹಾಗೋ. ಹಾಗಾದರೆ ನೀನೇ ನೋಡುವಿಯಂತೆ ನಾನು ಏನ್ಮಾಡ್ತೀನೀಂತ.

**(ಕಿಂದರಿಜೋಗಿ ಕಿಂದರಿ ಬಾರಿಸಲು ಆರಂಭಿಸುತ್ತಾನೆ. ಕಿಂದರಿ ನಾದ ಹೊಮ್ಮುತ್ತಿದ್ದಂತೆ ಒಬ್ಬೊಬ್ಬರಾಗಿ ಮಕ್ಕಳೆಲ್ಲ ಬರಲು ಆರಂಭಿಸುತ್ತಾರೆ. ಕಿಂದರಿಜೋಗಿ ಕಿಂದರಿ ಬಾರಿಸುತ್ತಾ ರಂಗದಿಂದ ಹೊರಡುತ್ತಾನೆ. ಅವನ ಹಿಂದೆ ಮಕ್ಕಳೆಲ್ಲಾ ಕುಣಿಯುತ್ತಾ ಕೆನೆಯುತ್ತಾ ಹೋಗುತ್ತಾರೆ. ಅಷ್ಟರಲ್ಲಿ ಜನ ಓಡೋಡಿ ಬರುತ್ತಾರೆ.)**

ಜನ : ಯಜಮಾನರೇ, ಗೌಡರೇ ಜೋಗಿಯನ್ನು ಹಿಂದಕ್ಕೆ ಕರೆಸಿ. ಮನೆಯಲ್ಲಿರೋ ಮಕ್ಕಳೆಲ್ಲ ಅವನ ಹಿಂದೆ ಓಡಿ ಹೋಗ್ತಿವೆ. ಎಷ್ಟು ಹೇಳಿದರೂ ಕೇಳ್ತಾ ಇಲ್ಲ. ಅಂಬೆಗಾಲಿನ ಮಕ್ಕಳೂ ಸಹ ಅವನ ಹಿಂದೆ ಹಿಂದೆ ಹೊಗ್ತಿವೆ. ಕರೀರಿ ಗೌಡರೇ, ಅವನ್ನ ಕರೀರಿ. ನಮ್ಮ ಮಕ್ಕಳನ್ನೆಲ್ಲ ಇಲಿಗಳ ಹಾಗೆ ನೀರಲ್ಲಿ ಮುಳುಗಿಸಿ ಸಾಯಿಸಿ ಬಿಟ್ಟಾನು.

ಇನ್ನೊಂದುಗುಂಪು : ಈ ಗೌಡರು ಹೇಳಿದ್ನ ಕೇಳಿಸ್ಕೊಳ್ಳೋ ಹಾಗಿಲ್ಲ. ಈ ಗೌಡನ ದುರಾಸೆ, ಜಿಪುಣತನದಿಂದ ನಾವೆಲ್ಲ ಹಾಳಾದೆವು. ಜೋಗಿಗೆ ಕೊಡಬೇಕಾದ್ದನ್ನು ಕೊಟ್ಟಿದ್ದರೆ ಈ ಹಣೇಬರ ನಮ್ಮದಾಗ್ತಿರಲಿಲ್ಲ.

**(ಅಷ್ಟರಲ್ಲಿ ಕುರುಡರು, ಕುಂಟರು, ಮೂಗರು, ಕಿವುಡರು ಎಲ್ಲಾ ಎದೆ ಎದೆ ಹೊಡ್ಕೋಳ್ತಾ ಬರುತ್ತಾರೆ.)**

ಮಂದಿ : ಗೌಡ ನಿನ್ನನ್ನು ನಮ್ಮ ದೇವರು ಅಂದ್ಕೊಂಡಿದ್ವು. ಈ ದಿನ ನಿನ್ನ ಬಣ್ಣ ಬಯಲಾಯ್ತು. ನಮ್ಮ ಮಕ್ಕಳೆಲ್ಲಾ

ಸಾಯೋಕೇಂತ ಹೊರಟಿದ್ದಾರೆ. ಬೇಗ ಜೋಗೀನಾ ಹಿಂದಕ್ಕೆ ಕರೆಸು.

**ಒಂದುಗುಂಪು :** ಈ ಗೌಡರನಿಗೆ ಕಿವಿ ಕೇಳ್ಸೊಲ್ಲ. ಇವನ ಮನೆ ಹಾಳಾಗ, ಇವನ ಹೆಂಡ್ತಿ ಮಕ್ಕಳು ಸಾಯ. ಇವನು ಯಾಕೆ ನಮ್ಮ ಗೋಳು ಕೇಳ್ತಾನೆ. ಅವನು ಜೋಗಿಯನ್ನು ಹಣ ಕೊಡಬೇಕಾಗುತ್ತೇಂತ ಕರೆಯೊಲ್ಲ. ನಾವೇ ಹೋಗಿ ಕರೆಯೋಣ. ಅವನ್ನ ಬೇಡಿಕೊಳ್ಳೋಣ. ಬನ್ನಿ ಎಲ್ಲರೂ ಹೋಗೋಣ.(ಹೋಗುವರು)

**(ಹಿನ್ನೆಲೆಯಲ್ಲಿ)**

ಜೋಗಣ್ಣ, ನಿಲ್ಲು ನಿಲ್ಲು ಗೌಡನ ಸಿಟ್ನ ಏನೂ ತಿಳೀದ ಮಕ್ಕಳ ಮೇಲೆ ತೀರಿಸ್ಕೋಬೇಡ. ನಮ್ಮ ಮಕ್ಕಳ್ನ ಸಾಯಿಸಬೇಡ. ನಮಗೆ ನಮ್ಮ ಮಕ್ಕಳು ಬೇಕು. ನಿಲ್ಲಿಸು ನಿನ್ನ ಕಿಂದರೀನ ಅಯ್ಯೋ! ಅಯ್ಯೋ! ಮಕ್ಕಳೇ ಅವನ ಹಿಂದೆ ಹೋಗ್ಬೇಡಿ. ಅವನು ಮಾಯಾವಿ. ನಿಮ್ಮನ್ನು ಸಾಯಿಸಿ ಬಿಡ್ತಾನೆ. ಬನ್ನಿ ಮಕ್ಕಳೇ! ಬನ್ನಿ! ಬನ್ನಿ ನೀವು ಕೇಳಿದ್ದನ್ನು ಕೊಡ್ತೇವೆ.

**ಇನ್ನೊಂದುಗುಂಪು :** (ಬಿಕ್ಕುತ್ತಾ) ಮಕ್ಕಳು! ಇನ್ನೆಲ್ಲಿಯ ಮಕ್ಕಳು. ಅದೋ ಅದೋ ಆ ಗುಹೆ ಒಳಗೆ ನುಗ್ಗಿದರು. ಒಬ್ಬರೂ ಉಳೀಲಿಲ್ಲ ಎಲ್ಲರೂ ಮರೆಯಾದರು. ಬೆಟ್ಟ ಬಾಗಿಲು ಮುಚ್ಚಿಬಿಡ್ತು. ಹೋದರು! ಹೋದರು ನಮ್ಮ ಮಕ್ಕಳೆಲ್ಲ ಗುಹೇಲಿ ಸಮಾಧಿಯಾಗೋದ್ರು. ಊರು ಸ್ಮಶಾನವಾಗೋಯ್ತು.

**ಒಂದುಗುಂಪು :** ನಡೀರಿ ಇಲ್ಲಿ ಅಳ್ತಾ ಕೂರೋದಲ್ಲ. ಹೋಗಿ ಆ ಗೌಡನ್ನ ವಿಚಾರಿಸ್ಕೊಳ್ಳೋಣ. ಅವನ ಕೈ ಕಾಲು ಕಿತ್ತು ಎಸೆಯೋಣ. ಅವನಿಗೆ ಸರಿಯಾಗಿ ಪಾಠ ಕಲಿಸೋಣ. **(ಗುಂಪು ಗೌಡನ ಮನೆಯತ್ತ ರಭಸದಿಂದ ಸಾಗುವುದು.**

ರಂಗ ಬರಿದು. ಕೇವಲ ಒಬ್ಬ ಕುಂಟ ಮಾತ್ರ ನಿಂತಿದ್ದಾನೆ.)

**ಕುಂಟ** : (ನಿಟ್ಟುಸಿರಿನಲ್ಲಿ)

ಜೋಗಿಯು ಅವನು
ಬರಿ ಜೋಗಿಯಲ್ಲ
ಕಿಂದರಿ ಬಾರಿಸಿ ಬಾರಿಸಿ
ರಂಗು ರಂಗಿನ ಲೋಕಗಳ
ಝಗ ಝಗಿಸುವ
ಹಣ್ಣಿನ ತೋಟಗಳ
ಬಗೆ ಬಗೆ ಬಿರಿದಾ ಹೂವುಗಳ
ವನಗಳ, ಬಣ್ಣದ ಪಕ್ಷಿಗಳ
ರೆಕ್ಕೆಯ ಬಿಚ್ಚಿ ನಲಿವ
ನವಿಲುಗಳ, ಹಾರುವ
ಬಣ್ಣದ ಚಿಟ್ಟೆಗಳ
ಕೆನೆಯುತ ಕುಣಿಯುವ
ಮರಿಜಿಂಕೆಗಳ
ಲಲ್ಲೇಮಾತಿನ ಮುದ್ದು ಗಿಳಿಗಳ
ಏನೆಲ್ಲವನೂ ತೋರುತ
ಕಣ್ಣಿಗೆ ನಾಕವ ಸೃಷ್ಟಿಪ
ಮಾಂತ್ರಿಕನವನು
ಮಕ್ಕಳು ಮೋಹಿಸಿ
ಹೋದರು ಹಿಂದೆ
ನಲಿಯುತ ನುಡಿಸಿದ
ಕಿಂದರಿ ಹಿಂದೆ
ಇಲ್ಲವಾಯಿತೆ
ಮಕ್ಕಳ ಸಂತಸ
ಮನೆ ತುಂಬಲು ಹರುಷ

ತಪ್ಪಿ ಮಾತಿಗೆ ಬಲಿ
ಗೊಟ್ಟನು ಗೌಡನು
ದುಃಖ ದುಗುಡಗಳ
ಊರಿಗೆ ಕೊಟ್ಟನು
ಊರಿಗೆ ಕೊಟ್ಟನು
ಕಿಲ ಕಿಲ ನಗುತಲಿ
ಬದುಕು ತೋಟದಲಿ
ಬಣ್ಣ ಬಣ್ಣದಾ ಹೂವರಳಿಸುತ
ಮನೆಮಂದಿಯ
ಮನದಲಿ ಸಂತಸ
ಬುಗ್ಗೆಯ ಚಿಮ್ಮಿಸುತ
ಕಣ್ಣಿಗೆ ಹಬ್ಬವ
ಮಾಡುವ ಮಕ್ಕಳ
ಕೊಲೆಗೈಸಿದಗೌಡನೆ
ವಂಶಬೆ ನಿನ್ನದು
ಕಮರಲಿ ಬೇಗ
ಕುಂಟನ ಶಾಪವು ನಿನಗಿರಲೀಗ

* * *

# ಪುಣ್ಯಕೋಟಿ

(ಗೋವಿನ ಹಾಡು)

## ದೃಶ್ಯ – 1

(ಗಣಪ ವೇಷದಲ್ಲಿ ಪಾತ್ರವೊಂದು ಪ್ರವೇಶಿಸುತ್ತದೆ. ಅದರೊಂದಿಗೆ ಸೂತ್ರಧಾರನೂ ಪ್ರವೇಶಿಸುತ್ತಾನೆ.)

ಸೂತ್ರಧಾರ : (ಗಣಪನಿಗೆ ವಂದಿಸುತ್ತಾ ನರ್ತಿಸುತ್ತಾನೆ)
ಮೊದಲಲಿ ವಂದಿಪೆ ಮುದದಲಿ ಗಣಪಗೆ
ಬದುಕುವ ಪರಿಯಂತಾ॥
ಸದಮಲ ಚಿತ್ತನೆ ಕರುಣದಿ ಪೊರೆಯೆಲೆ
ಮಧುಪರ ಗುಣವಂತಾ ॥1॥
ಚಿಕ್ಕದು ಬುದ್ಧಿಯ ತಿದ್ದುವ ಕಥೆಯಿದು
ಸಕ್ಕರೆ ರುಚಿಯಯ್ಯ ॥
ಮಕ್ಕಳ ನಗಿಸಲಿ ಅಕ್ಕರೆ ತೋರಲಿ
ಚೊಕ್ಕದಿ ಆಡಿಸಯ್ಯ ॥2॥
ನೀಡುವೆ ನಿನಗೆ ಕಡುಬನು ಕಡಲೆಯ
ಲಾಡನು ಕಜ್ಜಾಯ ॥
ಮಾಡುವೆ ಪೂಜೆಯ ಉಡುಗರ ಉಡಿಸುತ
ಬೇಡುತ ವರವಯ್ಯ ॥3॥
(ರಂಗದ ಮುಂಭಾಗಕ್ಕೆ ಬಂದು)

(ಪ್ರೇಕ್ಷಕರೆ ಕರ್ನಾಟಕದಲ್ಲಿ ಬಹಳ ಪ್ರಸಿದ್ಧವಾದ ಪುಣ್ಯಕೋಟಿಯ ಕತೆಯನ್ನು ನಾಟಕ ಮಾಡಿ ತೋರಿಸಲಿದ್ದೇವೆ. ಹುಲಿಯಂತಹ ಭಯಂಕರ ಪ್ರಾಣಿ ಬಡಪಾಯಿ ಹಸುವಿನ ಮಾತಿಗೆ, ಅದರ ಸತ್ಯವಚನಕ್ಕೆ ಸೋತು ಪ್ರಾಣತ್ಯಾಗ ಮಾಡಿದ ಕತೆ ನಿಮಗೆ ತೋರಿಸಲಿದ್ದೇವೆ. ಬನ್ನಿ ನಮ್ಮ ಕಾಳಿಂಗೇಗೌಡನ ಪ್ರೀತಿಯ ಆಕಳು ಪುಣ್ಯಕೋಟಿಯ ವಿಚಾರ ತಿಳ್ಕೋಳ್ಳೋಣ... ಅರೇ (ರಂಗದ ಪಾರ್ಶ್ವ ನೋಡುತ್ತಾ) ನಮ್ಮ ಕಾಳಿಂಗೇಗೌಡರೇ ಇತ್ತ ಬರ್ತಾ ಇದ್ದಾರಲ್ಲ! ಸರಿ. ನಾನು ಒಳಗೆ ಹೋಗ್ತೀನಿ. ಅವರಿಲ್ಲಿಗೆ ಯಾಕೆ ಬರ್ತಿದ್ದಾರೆ ನೋಡ್ತೀನಿ.)

ಕಾಳಿಂಗ : (ಪ್ರಾರ್ಥನೆ ಮಾಡುತ್ತಾನೆ)

ಸ್ವಾಮಿದೇವನೆ ಲೋಕಪಾಲನೆ
ತೇನಮೋಸ್ತುನಮೋಸ್ತುತೆ
ಪ್ರೇಮದಿಂದಲಿ ನೋಡು ನಮ್ಮನು
ತೇನಮೋಸ್ತುನಮೋಸ್ತುತೆ॥
ಏಳು ಕುದುರೆಯ ಬೆಳ್ಳಿತೇರನು
ಏರಿಬರುತಿಹ ಸೂರ್ಯನೆ
ಜಗದ ಕಣ್ಣಾಗಿರುವ ತೇಜನೆ
ಕೋಟಿ ಪ್ರಭೆಯ ಚಂಡಕಿರಣವ
ಉಟ್ಟುಮೆರೆವ ದೇವನೆ

(ಸುತ್ತಲೂ ನೋಡುತ್ತಾ) ಎಷ್ಟು ಪ್ರಶಾಂತವಾದ ಬೆಳಕು. ಆ ದೇವರ ಅನುಗ್ರಹವೇ ಅನುಗ್ರಹ. ಪ್ರಕೃತಿಯ ಸಮೃದ್ಧ ಸಿರಿ. ಹಟ್ಟಿ ತುಂಬಾ ಆಕಳ ಭಾಗ್ಯ. ಎಲ್ಲಿ ನೋಡಿದರೂ ದವಸ, ಧಾನ್ಯಗಳ ಹೊಲ; ಹಲಸು ಹೆಬ್ಬಲಸು ಮುಂತಾದ ಮರಗಳ ತೋಟ; ಚಿನ್ನದ ಗನಿಗಳು, ಕಾವೇರಿ ನದಿಯ ಮಂಜುಳ ಗೀತ. ಮನಸ್ಸಿಗೆ ಮುದವೆನಿಸಿದೆ.

(ಅಷ್ಟರಲ್ಲಿ ಮುದುಕಿ ಶಿವನಂಜಮ್ಮ ಪ್ರವೇಶಿಸುತ್ತಾರೆ. 'ಕಾಳಿಂಗ.... ಕಾಳಿಂಗ.... ಎಂದು ಕರೆಯುತ್ತಲೇ ಬರುತ್ತಾಳೆ.)

**ಶಿವನಂಜಮ್ಮ** : (ಕಾಳಿಂಗನನ್ನು ನೋಡಿ) ಇದ್ಯಾಕೆ ಮಗ ಹಿಂಗ ನಿಂತು ಬಿಟ್ಟದ್ದಿ. ವತಾರೆ ಏಟೊಂದು ಕೆಲಸ ಇಟಗೊಂಡು ಏನ್ ಧೇನ ಮಾಡ್ತಿದ್ದಿ ಮಗು. ಆಕಳ ಹಾಲು ಕರೀಬೇಕು. ವೊಡ್ಕೊಂಡೋಗಿ ಮೇಯಿಸ್ಕಂಬರಾಕೆ ಬೇಕು. ಬ್ಯಾಗನೆ ರೆಡಿಯಾಗು ಮಗ. ಬುತ್ತಿ ಕಟ್ಟಿ ಇಕ್ಕಿದ್ದೀನ. ಆಲು ಕರೆದ್ಬುಟ್ಟು ಅಡವಿಗೆ ಹೋಗಿ ಮೇಸ್ಕಂಬಂದ್ಬಿಡು. ನಾಳೆ ವತಾರೆ ದೀಪಾವಳಿ ಅಬ್ಬ ಬ್ಯಾರೆ.

**ಕಾಳಿಂಗ** : ನೀಯೇನೂ ಯೋಚ್ನೆ ಮಾಡ್ಬೇಡ. ನೀವೋಗು. ನಾ ಹಾಲು ಕರೆದು, ಅಟ್ಟಿಕೊಂಡು ಹೋಗ್ತೀನಿ. ನನ್ನ ಗೆಳೇರೂ ಜೊತೆಗೆ ಬರ್ತಾರೆ.

**ಶಿವನಂಜಮ್ಮ** : ಆತು ಮಗ. ಅಡವಿ ಕಡೆ ವೋಗೋವಾಗ ಸ್ವಲೂಪ ಜ್ವಾಪಾನ.

**ಕಾಳಿಂಗ** : ಆಯ್ತವ್ವ. ನೀ ಹೋಗು.

(ಮುದುಕಿ ಹೋಗುತ್ತಾಳೆ. ಕಾಳಿಂಗ ಸೊಂಟದಲ್ಲಿ ಸಿಕ್ಕಿಸಿದ್ದ ಕೊಳಲು ತೆಗೆದು ನುಡಿಸುತ್ತಾನೆ. ಕೊಳಲ ದನಿ ಕೇಳಿಸಿಕೊಂಡು ಆಕಳು ಒಂದೊಂದೇ ಬರುತ್ತದೆ. ಎದ್ದು ನಿಂತು ಕಾಳಿಂಗ ಹೆಸರಿಡಿದು ಕರೆಯುತ್ತಾನೆ. ಗಂಗೆ ಬಾರೆ ಗೌರಿ ಬಾರೆ, ತುಂಗಭದ್ರೆ ತಾಯಿ ಬಾರೆ, ಕಾಮಧೇನುವೆ ನೀನು ಬಾರೆ, ಬಾರೆ ಮುದ್ದು ಪುಣ್ಯಕೋಟಿಯೆ. ಬಂದು ನಿಂತು ಹಾಲು ಸೂಸಿ ಬೇಗ ತುಂಬಲಿ ಬಿಂದಿಗೆ (ಎಂದು ಒಂದೊಂದು ಹಸುವಿನ ಕೆಚ್ಚಲ ಕೆಳಗೆ ಬಿಂದಿಗೆ ಇಡುತ್ತಾನೆ. ಹಾಲು ಕರೆವಂತೆ ಅಭಿನಯಿಸುತ್ತಾನೆ. ಮತ್ತೆ ಪಕ್ಕಕ್ಕೆ ಬಂದು, ಕಾಳ, ಮಲ್ಲ, ಕೆಂಪ ಬನ್ನಿರಿ. ತುಂಬಿದ ಕೊಡಗಳನ್ನು ಕೊಂಡೊಯ್ಯಿರಿ ಎಂದು ಕೂಗಿ ಹೇಳುತ್ತಾನೆ. ಮೂವರು

ಯುವಕರು ಬಂದು ಕೊಡಗಳನ್ನು ಹೊತ್ತು ಒಯ್ಯುವಂತೆ ಅಭಿನಯಿಸುತ್ತಾರೆ.)

(ಹಸುಗಳನ್ನು ಕುರಿತು ಹೀಗೆ ಹೇಳುತ್ತಾನೆ)

: ಮಕ್ಕಳೇ ಈಗ ನಾವು ಕಾನನದ ಕಡೆ ಹೋಗುತ್ತೇವೆ. ಸ್ವಲ್ಪ ಎಚ್ಚರದಿಂದ ಇರಬೇಕು. ನಿಮಗೇ ಜಾಗಗಳು ಗೊತ್ತಿವೆ. ಎಳೆ ಹುಲ್ಲನು ಮೇದು, ಸಿಹಿ ನೀರು ಕುಡಿದು ನೆಳಲಲ್ಲಿ ದಣಿವಾರಿಸಿಕೊಳ್ಳಿ. ಕಂಡ ಕಂಡ ಕಡೇಲೆಲ್ಲ ನುಗ್ಗಿ ಅವರಿವರ ಹೊಲ ಮೇದು ಕೆಟ್ಟ ಹೆಸರು ತರಬೇಡಿ. ಯಾರೂ ಕೂಡಾ ತೀರಾ ಒಳಗೆ, ಬೆಟ್ಟದೊತ್ತಿಗೆ ಹೋಗಬೇಡಿ, ಜೋಕೆ. ಕ್ರೂರ ಹುಲಿಗಳು ಹೊಂಚಿ ಕಾಯುತ್ತಿರುತ್ತವೆ. ನಾನು ಅಲ್ಲಿಯೇ ಮಾವಿನ ಮರದಡಿ ಮಲಗಿರುತ್ತೇನೆ. ಸಂಜೆಯಾಗಿ ಮರಳುವಾಗ ನಾನು ಕೊಳಲು ನುಡಿಸುತ್ತೇನೆ. ಎಲ್ಲಿದ್ದರೂ ನೀವು ಬಂದು ಬಿಡಬೇಕು.

(ಹಸುಗಳು ತಲೆಯಾಡಿಸುತ್ತವೆ. ಕಾಳಿಂಗ ಒಂದೊಂದರ ಬಳಿ ಬಂದು ನೇವರಿಸಿ ಮುತ್ತಿಕ್ಕಿ, ''ಹೋಗಿ ಬನ್ನಿ. ನಿಮ್ಮ ಹಿಂದೆಯೇ ಬುತ್ತಿ ಹೊತ್ತು ಬರುತ್ತೇನೆ' – ಎನ್ನುತ್ತಾನೆ. ಹಸುಗಳು ನಿಧಾನವಾಗಿ ಹೆಜ್ಜೆ ಹಾಕುತ್ತಾ ಸಾಗುತ್ತವೆ. ಕಾಳಿಂಗ ಅವುಗಳನ್ನು ಗಮನಿಸಿ, ನಂತರ ಮನೆಯ ಕಡೆ ಮರಳುತ್ತಾನೆ.)

* * *

## ದೃಶ್ಯ – 2

(ಹಿನ್ನೆಲೆಯಲ್ಲಿ ಕಾಳಿಂಗನ ಕೊಳಲ ದನಿ ಕೇಳಿಸುತ್ತದೆ. ಹಸುಗಳೆಲ್ಲ ನಿಧಾನವಾಗಿ ರಂಗದ ಮೇಲೆ ಬರುತ್ತವೆ. ಅಷ್ಟರಲ್ಲಿ ಹುಲಿಯ ಗರ್ಜನೆ ಕೇಳಿ ಬರುತ್ತದೆ.)

ಗಂಗೆ : ಗೆಳತಿಯರೇ ಬೇಗ ಓಡಿ. ಅಯ್ಯಯ್ಯೋ ಹುಲಿರಾಯನ ಗರ್ಜನೆ ಕೇಳಿ ಬರುತ್ತಿದೆ. ಎಲ್ಲಿಯಾದರೂ ಬಂದು ಬಿಟ್ಟಾನು. ಕೂಗಿ ಕೂಗಿ ನಮ್ಮವರನ್ನೆಲ್ಲ.... ತುಂಗಾ.... ಯಮುನಾ.... ಗೌರಿ.... ಎಲ್ಲರೂ ಓಡಿ ಬನ್ನಿ.

**(ಹಸುಗಳು ಗಲಿಬಿಲಿಗೊಂಡು ಒಂದಕ್ಕೊಂದು ಢಿಕ್ಕಿ ಹೊಡೀತಾ ಓಡುತ್ತವೆ. ಹಿಂದಿನಿಂದ ಹುಲಿ ಪ್ರತ್ಯಕ್ಷವಾಗಿ)**

ಹುಲಿ : ನಿಲ್ಲಿರಿ ನಿಲ್ಲಿರಿ ಗೋವುಗಳೇ. ಓಡುವಿರೆಲ್ಲಿಗೆ? ನಾ ಬರುತಿಹೆ ಹಿಂದೆ ನಿಮ್ಮನ್ನು ತಿನ್ನಲು. ಹಸಿದಿಹೆ. ಬಳಲಿಹೆ. ಬರಿಗೈಯಾಗಿಹೆ. ಬಂದೇ ಬರುವೆನು ನಿಮ್ಮನ್ನು ಜಗಿವೆನು ಹಟ್ಟಿಯ ಕುಕ್ಕಿ ನಿಮ್ಮನು ಇಕ್ಕಿ ಭರ್ಜರಿ ಭೋಜನ ಮಾಡುವೆನು.

**(ಗುರುದೇವನ ಪ್ರವೇಶ)**

ಗುರುದೇವ : ನಿಲ್ಲು ನಿಲ್ಲು ಹುಲಿರಾಯ, ಇದೇನಿದು

ಭೂಮಂಡಲವನ್ನೇ ನಡುಗಿಸುವ ನಿನ್ನ ಗುಡುಗು ಗರ್ಜನೆ, ಪಾಪದ ಹಸುಗಳ ಮೇಲೆ ನಿನ್ನ ಪ್ರತಾಪ!

**ಹುಲಿ** : (ಕೋಪದಿಂದ) ಯಾರಯ್ಯ ನೀನು ಮಾನವ, ನನ್ನ ಜೊತೆ ನಿಂತು ಮಾತಾಡುವ ಧೈರ್ಯಬಂತೆ? ಮೊದಲು ನಿನ್ನ ಮುಗಿಸ್ತೀನಿ. ನಾನು ಯಾರು ಗೊತ್ತಾ? ಈ ಅಡವಿ ಸಾಮ್ರಾಟ. ನನ್ನ ಹೆಸರು ಚಂಡವ್ಯಾಘ್ರ.

**ಗುರುದೇವ** : ಓಹೋಹೋ! ನೀನು ಚಂಡವ್ಯಾಘ್ರ! ನಾನು ಯಾರೂಂತ ಗೊತ್ತಿಲ್ವ? ಕಾಡಿನಲ್ಲಿ ಗುಂಡಿಗೆ ಸಿಕ್ಕಿ ಸಾಯ್ತಾ ಇದ್ದಾಗ ನಿನ್ನ ಸೇವೆ ಮಾಡಿ ಬದುಕಿಸಿದ ನನ್ನನ್ನು ಮರೆತುಬಿಟ್ಟೆಯೇನು?

**ಚಂಡವ್ಯಾಘ್ರ** : (ಏನೋ ನೆನಪಿಸಿಕೊಂಡಂತೆ) ಹೌದು ಹೌದು ಗುರುಗಳೇ ತಪ್ಪಾಯ್ತು. ಕ್ಷಮಿಸಿ. ಆದರೆ ನನಗೆ ಸಿಕ್ಕ ಆಹಾರಾನ ತಪ್ಪಿಸಿದಿರಿ. ನೋಡುತ್ತೇನೆ. ಮತ್ತೆ ಯಾವುದಾದರೂ ಪ್ರಾಣಿ ಸಿಕ್ಕಿತೇನೋ!
**(ಎಂದು ಸುತ್ತಲೂ ನೋಡುತ್ತದೆ. ದೂರದಲ್ಲಿ ಪುಣ್ಯಕೋಟಿ ಹಸು ನಿಧಾನವಾಗಿ ಬರುವುದು ಕಾಣಿಸುತ್ತದೆ.)**

**ಚಂಡವ್ಯಾಘ್ರ** : (ಬಹಳ ಸಂತೋಷದಿಂದ) ಆಹಾ! ಅದೃಷ್ಟಾಂದ್ರೆ ಇದೇನೆ. ಒಂದು ಕೈ ತಪ್ಪಿ ಹೋದ್ರೆ ಮತ್ತೊಂದು ತಾನಾಗಿಯೇ ಬರ್ತಿದೆ. ಅಂತೂ ಇಂತೂ ಇವತ್ತು ಮೃಷ್ಟಾನ್ನ ಭೋಜನದ ಪುಣ್ಯ ನನ್ನ ಪಾಲಿಗಿದೆ. **(ಎಂದು ದಿಢೀರನೆ ಜಿಗಿಯುವುದಕ್ಕೂ ಪುಣ್ಯಕೋಟಿ ಬರುವುದಕ್ಕೂ ಸರಿ ಹೋಗುತ್ತದೆ)**

**ಚಂಡವ್ಯಾಘ್ರ** : (ಪುಣ್ಯಕೋಟಿಗೆ ಎದುರಾಗಿ ನಿಂತು) ಭಲೇ! ಭಲೇ ಭಲೇ! ಭಲೆ. ನೋಡಲು ಚೆನ್ನ. ತಡಮಾಡದೆ ಈಗಲೆ ತಿನ್ನುವೆ ನಿನ್ನ.

**ಪುಣ್ಯಕೋಟಿ** : (ಬೆಚ್ಚಿ)ಅಯ್ಯಯ್ಯೋ ಹುಲಿರಾಯ ಬೇಡುವೆ ನಿನ್ನನ್ನು,

ಬಿಟ್ಟು ಬಿಡು. ಬಳಲಿ ದಣಿದು ಬಾಯಾರಿ ಹಿಂಡಿನಿಂದ ಹಿಂದುಳಿದು ಬಿಟ್ಟೆ. ಹೋಗಲು ಬಿಡು ದಮ್ಮಯ್ಯ. (ಹೋಗಲು ತಿರುಗುತ್ತದೆ).

**ಚಂಡವ್ಯಾಘ್ರ** : ಹೋಗಲು ಬಿಡುವೆನೆ ನಿನ್ನನ್ನು. ನನ್ನಿಂದ ನೀನಿಂದು ತಪ್ಪಿಸಿಕೊಳ್ಳಲಾರೆ. ಕಡಿದು ಬಡಿದು ಸೀಳುತ್ತ ನಿನ್ನ, ಬಿಸಿ ಬಿಸಿ ರಕ್ತವ ಬಸಿದು ಕುಡಿವೆನು. ಅಲ್ಲದೆ ನೀನು ನನ್ನ ಕಾಡಿನಲ್ಲಿ ಬೆಳೆದಿದ್ದ ಪೈರು ಪಚ್ಚೆ ಹಾಳು ಮಾಡಿದೆ.

**ಪುಣ್ಯಕೋಟಿ** : ಅಯ್ಯಾ ಹುಲಿರಾಯ. ಸಲ್ಲದ ಅಪವಾದ ಹೊರಿಸುತ್ತಿರುವಿ. ನಾನು ಅಂಥವಳಲ್ಲ. ನನ್ನ ಯಜಮಾನ ಕಾಳಿಂಗನೆಂಬ ಗೊಲ್ಲ, ಅವನ ಮಂದಿಯಲ್ಲಿಯೇ ಮೇಲಾದವಳು. ನನ್ನನ್ನು ಪುಣ್ಯಕೋಟಿ ಎಂದು ಕರೆದಿದ್ದಾನೆ. ಏನೋ ದಣಿವು ಯೋಚನೆಯಲ್ಲಿ ಮುಳುಗಿ ಹಿಂದುಳಿದು ಬಿಟ್ಟೆ. ನಾನು ವಿನಾಕಾರಣ ಯಾರ ಹೊಲಗದ್ದೆಗಳನ್ನೂ ಅತಿಕ್ರಮಿಸಿ ಮೇದು ಹಾಳು ಮಾಡೋಲ್ಲ. ಅಹಿತ ಮಾಡೋಲ್ಲ ಮರ್ಯಾದೆಯಿಂದ ಬಾಳುವವಳು. ನಿನಗೆ ಕೈ ಮುಗೀತೇನೆ. ನನ್ನನ್ನು ಬಿಟ್ಟು ಬಿಡು. ನಿನ್ನ ತಂಗಿಯೆಂದು ಭಾವಿಸು. ಹೋಗಲಿ, ನನ್ನೊಂದು ಪ್ರಾರ್ಥನೆಯನ್ನಾದರೂ ಆಲಿಸು.

**ಚಂಡವ್ಯಾಘ್ರ** : ಏನದು ನಿನ್ನ ಪ್ರಾರ್ಥನೆ?

**ಪುಣ್ಯಕೋಟಿ** : ಅಣ್ಣ, ನನಗಿರೋ ಒಂದೇ ಒಂದು ಎಳೆಯಕಂದ ಕೊಟ್ಟಿಗೆಯಲ್ಲಿ ಬಿಟ್ಟು ಬಂದಿದ್ದೇನೆ. ಬೆಳಗಿನಿಂದ ಹಾಲೂಡಿಸಿಲ್ಲ. ನನಗಾಗಿ ಹಂಬಲಿಸುತ್ತಾ ಇರುತ್ತೆ. ಅದಕ್ಕಾಗಿ ನೀನು ಅವಕಾಶ ಮಾಡಿಕೊಟ್ಟರೆ ಅದಕ್ಕೆ ಮೊಲೆಯುಣಿಸಿ ಬಂದು ಬಿಡುತ್ತೇನೆ.

**ಚಂಡವ್ಯಾಘ್ರ** : ನಿನ್ನ ಈ ವಿನಯದ ಮಾತಿಗೆ ಮರುಳಾಗುವವನು

ನಾನಲ್ಲ. ಹಸಿದ ಹೊತ್ತಿನಲ್ಲಿ ಸಿಕ್ಕಿದ ನಿನ್ನನ್ನು ಬಿಟ್ಟು ಬಿಟ್ಟರೆ, ನನ್ನ ಕೈ ಜಾರಿ ಹೋದಂತೆ.

**ಪುಣ್ಯಕೋಟಿ** : ಖಂಡಿತವಾಗಿಯೂ ಬರುವೆ ಹುಲಿಯಣ್ಣ. ನಾನೆಂದಿಗೂ ಮಾತಿಗೂ ತಪ್ಪುವವಳಲ್ಲ. ಯಾರ ಆಣೆಯಿಟ್ಟು ಹೇಳಬೇಕೆಂದರೂ ಹೇಳುತ್ತೇನೆ. ತ್ರಿಮೂರ್ತಿಗಳಾಣೆ, ನನಗಿರುವ ಒಬ್ಬನೇ ಕಂದನ ಮೇಲಾಣೆ, ತಂದೆ ತಾಯಿಗಳಾಣೆ.... ಇನ್ನೂ ಹೇಳಬೇಕೆಂದರೆ ನನ್ನ ಪಾಲಿಗೆ ಸತ್ಯವೇ ತಾಯಿ ತಂದೆ. ಆದ್ದರಿಂದ ಸತ್ಯವಾಕ್ಯಕೆ ತಪ್ಪಿ ನಡೆಯುುವವಳಲ್ಲ. ತಪ್ಪಿದರೆ ಅ ಭಗವಂತನೂ ಮೆಚ್ಚುವುದಿಲ್ಲ. ನಿನಗೆ ಸಂದೇಹ ಬೇಡ.

**ಚಂಡವ್ಯಾಘ್ರ** : (ಗುರುದೇವರತ್ತ ತಿರುಗಿ) ಏನು ಗುರುಗಳೇ ಇದರ ಮಾತನ್ನು ನಂಬಬಹುದು ತಾನೇ?

**ಗುರುದೇವ** : ಅಯ್ಯಾ ಹುಲಿರಾಯ, ನನ್ನನ್ನೇಕೆ ಕೇಳುತ್ತಿ. ನಿನ್ನಲ್ಲಿ ನಂಬಿಕೆ ಹುಟ್ಟಿದರೆ ಕಳಿಸಿಕೊಡುವ ಧೈರ್ಯ ಮಾಡು.

**ಚಂಡವ್ಯಾಘ್ರ** : ಆಯಿತು. ನನಗೆ ಇವಳನ್ನು ನೋಡಿದರೆ ತಿನ್ನುವ ಆಸೆ ಪ್ರಬಲವಾಗಿದ್ದರೂ ಕನಿಕರವೆನಿಸುತ್ತಿದೆ. ರಾಜನಾದ ವನಿಗೆ ದೈನ್ಯರಾಗಿ ಬೇಡಿದವರಿಗೆ ಸ್ವಲ್ಪವಾದರೂ ಕನಿಕರ ತೋರಬೇಕೆಂದಿದೆಯಲ್ಲ. ಅಲ್ಲದೆ ನೀವೂ ಅದರ ಮಾತಿಗೆ ಸಾಕ್ಷಿಯಾಗಿ ನಿಂತಿದ್ದೀರಿ. ಅದಕ್ಕೇ ಅವಳನ್ನು ಕಳಿಸಿಕೊಟ್ಟು, ಸತ್ಯ ವಚನದ ನಿಷ್ಠೆ ಎಷ್ಟೆಂದು ನೋಡು ತ್ತೇನೆ. (ಪುಣ್ಯಕೋಟಿ ಕಡೆ ತಿರುಗಿ) ಹೋಗಿ ಬಾ ತಂಗಿ. ಆದರೆ ಮರಳಿ ಬೇಗ ಬರಬೇಕು – ಎಚ್ಚರವಿರಲಿ.

**ಪುಣ್ಯಕೋಟಿ** : ಅಣ್ಣಾ ನಿನ್ನುಪಕಾರವನ್ನು ಜನ್ಮಜನ್ಮಾಂತರದಲ್ಲಿಯೂ ಮರೆಯುುವುದಿಲ್ಲ (ಎಂದು ವಂದಿಸಿ ಅಲ್ಲಿಂದ ತೆರಳುತ್ತದೆ.)

**ಚಂಡವ್ಯಾಘ್ರ** : ಗುರುದೇವ ನಾನು ಹೊರಗೆ ಕಾಣುವಷ್ಟು ಕ್ರೂರಿಯಲ್ಲ. ಕಂದನಿಗೆ ಹಾಲೂಡಿಸಿ ಬರುತ್ತೇನೆಂದಾಗ ನನ್ನ

ಮನಸ್ಸಿನಲ್ಲಿ ವಾತ್ಸಲ್ಯ. ಕರುಣೆಗಳು ಹುಟ್ಟಿಕೊಂಡವು. ಅದನ್ನು ನೋಡಿದರೆ ನಿಜವಾಗಿಯೂ ಪ್ರಾಣದ ಆಸೆ ಬಿಟ್ಟಿರುವುದು ಗೋಚರಿಸುತ್ತದೆ. ಮೃಗರಾಜನೆನಿಸಿ ಇಷ್ಟೂ ಕರುಣೆ ತೋರದಿದ್ದರೆ ಹೇಗೆ? ಪುಣ್ಯವನ್ನು ಸ್ವಲ್ಪವಾದರೂ ಗಳಿಸದಿದ್ದರೆ ಹೇಗೆ?

**ಗುರುದೇವ** : ಓಹೋ ನಿಮ್ಮ ನಡತೆಯಲ್ಲಿ ಸ್ವಾರ್ಥವಿದೆ ಎಂದಾಯಿತು. ರಾಜನಾಗಿ ಗೌರವ ಉಳಿಸಿಕೊಳ್ಳಬೇಕೆಂದು ಅದನ್ನು ಕಳಿಸಿಕೊಟ್ಟಿದ್ದೀರಿ. ತಿಳಿಯಿತು. ಆದರೆ ಒಂದು ವೇಳೆ ಅದು ಹಿಂತಿರುಗದಿದ್ದರೆ ಏನು ಮಾಡುತ್ತೀರಿ?

**ಚಂಡವ್ಯಾಘ್ರ** : ಏನು! ಬಾರದೆ ಹೋಗುವುದೇ? ಸಾಧ್ಯವಿಲ್ಲ. ಒಂದು ವೇಳೆ ಬಾರದಿದ್ದರೆ ಪ್ರಪಂಚವನ್ನೆಲ್ಲ ಹುಡುಕಿಯಾದರೂ ಎಳೆದು ತರುತ್ತೇನೆ.

**ಗುರುದೇವ** : ಅಲ್ಲೀವರೆಗೆ ಏನು ಮಾಡುತ್ತೀರಿ?

**ಚಂಡವ್ಯಾಘ್ರ** : ಸ್ವಲ್ಪ ಹೊತ್ತು ತಾನೇ? ಅದರ ದಾರಿ ಕಾಯುತ್ತಾ ನಿಲ್ಲುತ್ತೇನೆ.

**ಗುರುದೇವ** : ಹಾಗಾದರೆ ನೀವು ಕಾಯಿರಿ. ನನಗೆ ಕೆಲಸವಿದೆ ಮತ್ತೆ ಬರುತ್ತೇನೆ.

* * *

## ದೃಶ್ಯ – 3

(ಕಾಳಿಂಗನ ಕೊಟ್ಟಿಗೆ, ಹಸುಗಳೆಲ್ಲ ಉದ್ವಿಗ್ನಗೊಂಡಂತೆ ಕಾಣುತ್ತವೆ. ಅವುಗಳಲ್ಲಿ ಗೌರಿ ಎಂಬ ಹಸುವು ಪುಣ್ಯಕೋಟಿ ಕಾಣದ್ದನ್ನು ಗಮನಿಸುತ್ತದೆ.)

ಗೌರಿ : ಗೆಳತಿಯರೇ ನಾವೆಲ್ಲರೂ ಬಂದಿದ್ದೇವೆ. ಆದರೆ ಪುಣ್ಯಕೋಟಿಯೇ ಕಾಣುತ್ತಿಲ್ಲವಲ್ಲ.

ಗಂಗೆ : ನಾವೂ ಬರುವಾಗ, ಹುಲಿಯ ಗರ್ಜನೆಗೆ ಹೆದರಿ ಪ್ರಾಣಭಯದಿಂದ ಯಾರಿದ್ದಾರೆ, ಯಾರಿಲ್ಲ ಎನ್ನುವುದನ್ನು ಗಮನಿಸದೆ ಓಡೋಡಿ ಬಂದು ಬಿಟ್ಟೆವು. ಇಲ್ಲಿ ಬಂದ ಮೇಲೆ ಅದರ ಕರು ನಮ್ಮಲ್ಲಿಗೆ ಬಂದು ಅಮ್ಮ ಎಲ್ಲಿ ಅಮ್ಮ ಎಲ್ಲಿ? ಯಾಕಿನ್ನೂ ಬಂದಿಲ್ಲ' ಎಂದೆಲ್ಲ ಕೇಳಿದಾಗ ಮಾತ್ರ ಪುಣ್ಯಕೋಟಿ ನಮ್ಮೊಟ್ಟಿಗೆ ಬಂದಿಲ್ಲ ಅನ್ನೋದು ತಿಳೀತು.

ಕಾಮಧೇನು : ಹಾಗಾದರೆ ಈಗೇನು ಮಾಡುವುದು ನಮ್ಮೊಡೆಯ ಅದು ಎಲ್ಲಿ ಅಂತ ಕೇಳಿದರೆ ಏನು ಹೇಳುವುದು? ಒಟ್ಟೊಟ್ಟಿಗೆ ಇರಿ, ಜೊತೆ ಬಿಡಬೇಡಿ ಎಂದೆಲ್ಲಾ ಹೇಳಿ ಎಚ್ಚರಿಸಿದ್ದರೂ ಹೀಗಾಯಿತಲ್ಲಾ! ಈಗೇನು ಮಾಡುವುದು.

ಗೌರಿ : ನನಗೆ ಭಯವಾಗ್ತಿದೆ. ಆ ದಾರೀಲಿ ಹುಲಿಗಳ ಹಾವಳಿ ಜಾಸ್ತಿ. ಪಾಪ, ಆ ಪುಣ್ಯಕೋಟಿ ಹುಲಿ ಬಾಯಿಗೇನಾದರೂ ಸಿಕ್ಕಿ ಬಿಟ್ಟಿದೆಯೋ ಏನು?

(ಅಷ್ಟರಲ್ಲಿ ಪುಣ್ಯಕೋಟಿಯ ಕರು ಅಳುತ್ತಾ ಗೌರಿಯ ಬಳಿಗೆ ಬರುತ್ತೆ)

**ಕರು** : ಅಮ್ಮ ಬೇಕು, ಅಮ್ಮ ಬೇಕು. ಅಮ್ಮನ್ನ ಹುಲಿ ತಿಂದು ಬಿಟ್ಟಿದೆಯೇನು? ನನಗೆ ಅಮ್ಮ ತಂದುಕೊಡು (ಎಂದು ಬಿಕ್ಕಿ ಬಿಕ್ಕಿ ಅಳುತ್ತೆ)

**ಗಂಗೆ** : (ಕರುವನ್ನು ಬಳಿಗೆ ಎಳೆದು ಅಪ್ಪಿಕೊಂಡು) ಅಳಬೇಡ ಮರಿ ಅಮ್ಮನಿಗೆ ಏನೂ ಆಗಿರೋಲ್ಲ. ಎಲ್ಲೋ ಏನೋ ಸ್ವಲ್ಪ ತಡವಾಗಿದೆ. ಬಂದೇ ಬರುತ್ತಾಳೆ. ನೋಡು ನಾವೆಲ್ಲಾ ಇದ್ದೀವಿ. ನಿನ್ನ ಗೆಳೆಯರೆಲ್ಲ ಇದ್ದಾರೆ. ಹೋಗು ಅವುಗಳ ಜೊತೆ ಆಡಿಕೋ.

**ಕರು** : ಇಲ್ಲ.... ಇಲ್ಲ.... ನನಗೆ ಆಟ ಬೇಡ. ಅಮ್ಮ ಬೇಕು (ಅಳುತ್ತಾ ಹೋಗಿ ಒಂದು ಮೂಲೆಯಲ್ಲಿ ಸಪ್ಪೆಮೋರೆ ಹಾಕಿಕೊಂಡು ಕೂರುತ್ತದೆ. ಉಳಿದ ಹಸುಗಳು ಚಡಪಡಿಸುತ್ತಾ ಪುಣ್ಯಕೋಟಿ ಬರುವ ದಿಕ್ಕುಗಳತ್ತ ಹೋಗಿ ಹೋಗಿ ನೋಡಿ ಬರುತ್ತವೆ.)

(ಸ್ವಲ್ಪ ಸಮಯದ ನಂತರ)

**ಪುಣ್ಯಕೋಟಿ** : ಕಂದಾ... ಚಿನ್ನ ನನ್ನ ಮುದ್ದೇ, ಎಲ್ಲಿದ್ದೀ? ಇಗೋ ನಿನ್ನಮ್ಮ ಬಂದು ಬಿಟ್ಟಿದ್ದೇನೆ. ಬಾ ಮಗು.... ಬಾ ಮಗು (ಎಂದು ಭಾವುಕತೆಯ ಆವೇಶದೊಂದಿಗೆ ರಭಸದಿಂದ ಒಳ ಬರುತ್ತದೆ. ಸದ್ದು ಕೇಳಿದ್ದೇ ಉಳಿದೆಲ್ಲಾ ಹಸುಗಳೂ ಕುತೂಹಲದಿಂದ ತಲೆ ಎತ್ತಿ ನೋಡಿ, ಸಂಭ್ರಮದಿಂದ ಪುಣ್ಯಕೋಟಿಯ ಬಳಿಗೆ ಓಡುತ್ತವೆ.)

**ಎಲ್ಲಹಸುಗಳು** : (ಉದ್ವೇಗದೊಂದಿಗೆ) ಪುಣ್ಯಕೋಟಿ... ಪುಣ್ಯಕೋಟಿ.... ಬಾ ತಾಯಿ, ಯಾಕಿಷ್ಟು ತಡಮಾಡಿ ಬಿಟ್ಟೆ? ಎಲ್ಲಿಗೆ ಹೋಗಿದ್ದೇ? ನಾವೆಲ್ಲ ಎಷ್ಟು ಹೆದರಿಬಿಟ್ಟಿದ್ದೆವು ಗೊತ್ತಾ? ಹೋಗು ಹೋಗು ಮೊದಲು ನಿನ್ನ ಕಂದನನ್ನು

ಸಮಾಧಾನ ಮಾಡು. ಪಾಪ ತುಂಬ ಹೆದರಿಬಿಟ್ಟಿದೆ.

**ಪುಣ್ಯಕೋಟಿ** : ಅಕ್ಕಂದಿರೆ ನೀವು ಹೆದರಿದ್ದೇ ನಿಜವಾಗಿದೆ. ನನ್ನ ಬದುಕು ಇನ್ನು ಕೆಲವೇ ಕ್ಷಣಗಳು! ನನ್ನ ಕಂದನಿಂದ ಕಡೆಯ ವಿದಾಯ ತೆಗೆದುಕೊಳ್ಳಲೆಂದೇ ಬಂದಿದ್ದೇನೆ.

**ಎಲ್ಲ ಹಸುಗಳು** : (ಆಶ್ಚರ್ಯದಿಂದ) ಏನು ತಾಯಿ ನೀನು ಹೇಳುತ್ತಿರುವುದು, ಕಡೆಯ ವಿದಾಯ! ಏನಿದರ ಅರ್ಥ?!

**ಪುಣ್ಯಕೋಟಿ** : ಹೌದು, ಬರುವಾಗ ತಡವಾಯಿತು. ನನ್ನ ಕಂದನ ನೆನಪೊಂದು ಕಡೆ, ಹಸಿವು, ದಣಿವು ಬಾಯಾರಿಕೆಗಳಿಂದ, ಜೊತೆಗೆ ಸ್ವಲ್ಪ ಕತ್ತಲೂ ಇದ್ದುದರಿಂದ ನೀವೆಲ್ಲಾ ಮುಂದು ಮುಂದು ಹೋದದ್ದನ್ನು ಗಮನಿಸಲೇ ಇಲ್ಲ. ನಿಧಾನವಾಗಿ ಬರುತ್ತಿದ್ದೇ. ಎಲ್ಲಿಂದಲೋ ಒಂದು ಹುಲಿ ಜಿಗಿದು ನನ್ನ ಮುಂದೆ ಬಂದು ನಿಂತು, ತನಗೆ ಆಹಾರವಾಗಬೇಕೆಂದು ಕೇಳಿತು. ನಾನು ಹೆದರಿದೆ. ಆದರೂ ಸಮಾಧಾನ ತಂದುಕೊಂಡು, ಒಂದಲ್ಲ ಒಂದು ದಿನ ಸಾಯಲೇಬೇಕೆಂದು ಧೈರ್ಯ ತಂದುಕೊಂಡೆ ನಾದರೂ ಕಂದನ ನೆನಪು ಕಾಡಿತು. ಅಂಗಲಾಚಿ, ಬೇಡಿಕೊಂಡು ಸ್ವಲ್ಪ ಕಾಲಾವಕಾಶ ತೆಗೆದುಕೊಂಡು ಬಂದಿದ್ದೇನೆ.

**ಕಾಮಧೇನು** : ಹೇಗಿದ್ದರೂ ಬಂದಿದ್ದೀಯ. ಮತ್ತೆ ಆ ಕಡೆ ಹೋಗಲೇ ಬೇಡ. ನೀನಿರುವ ಜಾಗ ಅದಕ್ಕೇನು ಗೊತ್ತಾಗುತ್ತೆ. ನಿನ್ನ ಪಾಡಿಗೆ ನೀನು ನಿನ್ನ ಕಂದನನ್ನು ನೋಡಿಕೊಂಡು ತೆಪ್ಪಗಿರು.

**ಪುಣ್ಯಕೋಟಿ** : ಹಾಗೆ ಮಾಡುವುದುಂಟೇ ತಪ್ಪು. ತಪ್ಪು... ಮಾತಿಗೆ ತಪ್ಪುವ ಪ್ರಶ್ನೆಯೇ ಇಲ್ಲ. ನನಗೆ ಹೋಗಲೇ ಬೇಕಿದೆ. (ಎಂದು – ಕಂದಾ ಕಟ್ಟಾಣಿ ಎಲ್ಲಿದ್ದೀ ಮರಿ? ಎನ್ನುತ್ತಿರಲು ತಾಯಿ ಧ್ವನಿ ಕೇಳಿ ಕರುಗಳ ಮಧ್ಯೆ

ಇದ್ದ ಪುಣ್ಯಕೋಟಿ ಕರು ಜಿಗಿಯುತ್ತಾ ಓಡಿ ಬರುತ್ತದೆ.)

ಕರು : ಅಮ್ಮ! ಅಮ್ಮ! ಯಾಕಮ್ಮ ಇಷ್ಟು ತಡಮಾಡಿದೆ? ನನಗೆ ಮಮ್ಮು ಬೇಕು. ನಿನ್ನ ಮಡಿಲಲ್ಲಿ ಮಲಗಬೇಕು. ಇವರ ಜೊತೇನೇ ಯಾಕೆ ಬರಲಿಲ್ಲ. ಏನಾದರೂ ಆಯ್ತಾ? ಅಮ್ಮ ಅಳ್ತಿದ್ದೀಯ? ಯಾಕಮ್ಮ ಏನಾಯಿತು?

ಪುಣ್ಯಕೋಟಿ : ಕಂದಾ, ನನ್ನ ದುಃಖ, ನನ್ನ ಸಮಸ್ಯೆ ನಿನಗೆ ಅರ್ಥವಾಗೋಲ್ಲ. ನೀನಿನ್ನೂ ಚಿಕ್ಕದು. ಬಾ ನಿನಗೆ ಮೊಲೆಯೂಡಿಸಿ, ನನಗೆ ಬೇಗನೆ ಹೋಗಬೇಕಿದೆ.

ಕರು : ಮತ್ತೆ ಹೋಗುವುದೇಕಮ್ಮ? ನಾನು ನಿನಗೆ ಬೇಸರವಾದೆನೆ? ನನ್ನನ್ನು ಬಿಟ್ಟು ಹೋಗುತ್ತೇನೆ. ಎನ್ನುತ್ತೀಯಲ್ಲ, ನಿನಗೆ ಮನಸ್ಸಾದರೂ ಹೇಗೆ ಬರುತ್ತೆ? ನಾನಂತೂ ನಿನ್ನನ್ನು ಹೋಗಗೊಡುವುದಿಲ್ಲ. ನನಗೆ ನೀನು ಬೇಕು.

ಪುಣ್ಯಕೋಟಿ : ಕಂದಾ ಯಾವ ತಾಯಿಗೆ ತಾನೇ ತನ್ನ ಮಗು ಬೇಡವಾಗುತ್ತೆ. ಆದರೆ ನನಗೆ ಹೋಗಲೇಬಾಕಾಗಿದೆ. ನಾನು ಹಿಂತಿರುಗಿ ಬರುತ್ತೇನೆಂದು ಒಬ್ಬರಿಗೆ ಮಾತು ಕೊಟ್ಟಿದ್ದೇನೆ.

ಕರು : ಯಾರಿಗೆ ಮಾತು ಕೊಟ್ಟಿದ್ದೀಯ? ಮಾತು ಯಾಕೆ ಕೊಟ್ಟೆ? ಹೇಳಮ್ಮ.

ಪುಣ್ಯಕೋಟಿ : ಕಂದಾ ಬರುವಾಗ ಹುಲಿರಾಯ ನನ್ನನ್ನು ತಿನ್ನಬೇಕೆಂದುಕೊಂಡು ಹಠ ಮಾಡಿದ. ಅವನಿಂದ ತಪ್ಪಿಸಿಕೊಂಡು ಬರುವುದು ಸಾಧ್ಯವಿರಲಿಲ್ಲ. ಆದರೂ ನಿನ್ನ ನೆನಪಾಗಿ ಬಹಳ ಸಂಕಟಪಟ್ಟು ನೋಡಲೇಬೇಕೆನಿಸಿ ಅವನನ್ನು ಕಾಡಿಬೇಡಿ, ಕಾಲು ಹಿಡಿದು, ನಿನಗೆ ಮೊಲೆಯೂಡಿಸಿ ಸ್ವಲ್ಪ ಹೊತ್ತಿನಲ್ಲಿ ಬಂದು ಬಿಡುತ್ತೇನೆಂದು ಮಾತು ಕೊಟ್ಟು ಬಂದಿದ್ದೀನಿ.

ಕರು : ಅಮ್ಮ ನೀನು ಹುಲಿ ಬಾಯಿಗೆ ಸಿಕ್ಕಿ ನಮ್ಮನ್ನು ತಬ್ಬಲಿ ಮಾಡುವುದಾದರೂ ಏಕೆ? ನನ್ನನ್ನು ಬಿಟ್ಟು ಹೋಗಬೇಡವೇ ಅಮ್ಮ. ಸುಮ್ಮನೆ ಇಲ್ಲಿಯೇ ಇದ್ದು ಬಿಡು. ದುಷ್ಟ ಮೃಗಕ್ಕಾಗಿ ಪ್ರಾಣ ಬಿಡುವುದರಲ್ಲಿ ಏನರ್ಥ ಇದೆ.

ಪುಣ್ಯಕೋಟಿ : ಇಲ್ಲ ಕಂದ. ಹಾಗೆಲ್ಲ ಮಾಡಬಾರದು. ದುಷ್ಟರಾಗಲೀ ಒಳ್ಳೆಯರಾಗಲಿ ಅದು ಮುಖ್ಯವಲ್ಲ. ಯಾರಾದರೇನು ನಾವು ಕೊಟ್ಟ ಮಾತು ಉಳಿಸಿಕೊಳ್ಳಲೇ ಬೇಕು. ಇಂದಿಗೆ ನನ್ನ ನಿನ್ನ ಋಣ ತೀರಿತು ಕಂದ.

ಕರು : ಅಮ್ಮ ನೀನು ಮಾತು ಉಳಿಸಿಕೊಳ್ಳಲೇಬೇಕೆಂದರೆ, ನನ್ನನ್ನು ತಬ್ಬಲಿ ಮಾಡಿ ಹೋಗುವುದು ಬೇಡ. ನೀನು ಹೋಗಿ ನಾನು ಬದುಕಿ ಉಳಿಯುವುದಕ್ಕಿಂತ ಇಬ್ಬರೂ ಹುಲಿಗೆ ಆಹಾರವಾಗೋಣ.

ಪುಣ್ಯಕೋಟಿ : ಎಂಥ ಮಾತಾಡುತ್ತೀ ಕಂದಾ! ನಿನ್ನನ್ನು ಸಾಯ ಬಿಡುವೆನೇ. ಈ ತಾಯಿ ಮನಸ್ಸನ್ನು ಅರ್ಥಮಾಡಿಕೊಂಡು ನನ್ನನ್ನು ಸಂತೋಷದಿಂದ ಕಳಿಸಿಕೊಡು. ದೇವರ ದಯೆಯಿದ್ದರೆ, ಆ ಹುಲಿರಾಯ ನಿಗೆ ಒಳ್ಳೆ ಬುದ್ಧಿ ಬಂದು ನನ್ನ ಹೋಗಗೊಡುತ್ತಾನೆ. ಬಾ ಕಂದ ಮೊಲೆಯುಂಡು, ಬೇಗದಿ ಹೋಗಬಿಡು.

ಕರು : ಅಮ್ಮಾ ನಿಜವಾಗಿಯೂ ಹೋಗಬಯಸುವೆಯೇನು? ನೀ ಹೋದರೆ ಯಾರನ್ನು ಅಮ್ಮ ಎಂದು ಕರೆಯಲಿ. ಯಾರ ಬಳಿ ಮಲಗಲಿ? ಯಾರ ಮೊಲೆ ಕುಡಿಯಲಿ? ಯಾರ ಸೇರಿ ಬದುಕಲಿ?

ಪುಣ್ಯಕೋಟಿ : (ತನ್ನೆಲ್ಲ ಬಳಗದವರನ್ನು ನೋಡಿ) ಅಕ್ಕಂದಿರಾ ಅಮ್ಮಂದಿರಾ, ಬಂಧುಬಾಂಧವರಿರಾ. ಕಂದ ನನ್ನದು ನೊಂದಿಹುದು. ನೀವೆಲ್ಲರೂ ಇದನ್ನು ನಿಮ್ಮ

ಮಗುವೆಂದೇ ನೋಡಿಕೊಳ್ಳಿ. ತಬ್ಬಲಿ ಮಗು ತಪ್ಪಿ ನಡೆದರೂ ಸೈರಿಸಿಕೊಂಡು ಬುದ್ಧಿ ಪೇಳಿ ಸರಿಯಾಗಿ ನಡೆಸಿರಿ. ಮುಂದೆ ಬಂದರೆ ಹಾಯದೆ ಹಿಂದೆ ಬಂದರೆ ಒದೆಯದೆ, ಪ್ರೀತಿಯಿಂದಲಿ ನೋಡಿಕೊಳ್ಳಿ (ಕರುವಿಗೆ) ಬಾ ಕಂದ ಇಗೋ ಇನ್ನು ಮುಂದೆ ಇವರೇ ನಿನ್ನ ಹೆತ್ತಮ್ಮಗಳು. ಇವರು ಹೇಳಿದಂತೆ ನಡೆದುಕೋ ಕಂದ. ಎಂದೂ ಹಿಂಡಗಲಬೇಡ. ಹಿಂದೆಯೂ ಇರಬೇಡ ಮುಂದೆಯೂ ಇರಬೇಡ. ನಡುವೆಯೇ ಇರು.

**ಎಲ್ಲಹಸುಗಳು :** ಪುಣ್ಯಕೋಟಿ ತಾಯಿ ನೀನು ಹೋಗಲೇಬೇಕೆಂದು ಹಠ ಹಿಡಿದಿರುವೆ. ನೀನು ನಮ್ಮ ಕುಲಕ್ಕೆಲ್ಲ ಕಣ್ಣಿನಂತಿದ್ದೆ. ನಮ್ಮ ಭಾಗ್ಯದಂತಿದ್ದೆ. ನೀನಿಲ್ಲದ ಈ ಕೊಟ್ಟಿಗೆ ಶೂನ್ಯವೆನಿಸುವುದು ನಡೆ ತಾಯೆ ನಾವೂ ನಿನ್ನೊಟ್ಟಿಗೆ ಬಂದು ಆ ಹುಲಿರಾಯನನ್ನು, ನಿನ್ನನ್ನು ಉಳಿಸುವಂತೆ ಬೇಡಿಕೊಳ್ಳುತ್ತೇವೆ.

**ಪುಣ್ಯಕೋಟಿ :** (ಹೆದರಿ) ಅಯ್ಯಯ್ಯೋ ಬೇಡ ಬೇಡ. ಆ ವ್ಯಾಘ್ರನ ಸ್ವಭಾವ ಹೇಳಲಾಗದು. ನಾನೊಬ್ಬಳು ಸತ್ತು ಒಂದು ಮಗು ಅನಾಥವಾಗುವುದೇ ಇಷ್ಟು ಚಿಂತೆಗೆ, ನೋವಿಗೆ ಕಾರಣ ವಾಗುತ್ತಿರುವಾಗ ಏನಾದರೂ ಅಪಾಯ ಸಂಭವಿಸಿ, ಎಷ್ಟೊಂದು ಕಂದಗಳು ತಬ್ಬಲಿಯಾಗಲು ನಾನು ಬಿಡಬೇಕೆ? ಬರುತ್ತೇನೆ ಅಕ್ಕ ತಂಗಿಯರೇ. ನನ್ನ ಕಂದನನ್ನು ನಿಮ್ಮದೆಂದು ಕಾಣಿರಿ.... ಪುಣ್ಯವಿದ್ದರೆ ಪ್ರಾಣದೊಂದಿಗೆ ಬರುತ್ತೇನೆ. ನಮಸ್ಕಾರ. (ಹೇಳುತ್ತಾ ದುಃಖಿಸಿ ಕಂಬನಿಗೆರೆದು ಮತ್ತೆ ಮತ್ತೆ ತನ್ನ ಕರುವನ್ನು ಅಪ್ಪಿ ಮುದ್ದಾಡುತ್ತದೆ.)

* * *

## ದೃಶ್ಯ – 4

**(ಬೆಟ್ಟದೊತ್ತಿನ ಕಾಡು. ಚಂಡವ್ಯಾಘ್ರ ಕೋಪಾವಿಷ್ಟವಾಗಿ ಶತಪಥ ಹಾಕುತ್ತಿದೆ. ಪುಣ್ಯಕೋಟಿ ಬರುತ್ತಿರಬಹುದೇನೋ ಎಂದು ಆ ಕಡೆ ಈ ಕಡೆ ನೋಡುತ್ತಿದೆ.)**

**ಚಂಡವ್ಯಾಘ್ರ** : ಹೋಗಿ ಎಷ್ಟು ಹೊತ್ತಾಯಿತು. ಮಳ್ಳಿಯಂತೆ ಮಾತಾಡಿ ಮೋಸ ಮಾಡಿತು. ನಾನು ತಪ್ಪು ಮಾಡಿದೆ. ಕೈಗೆ ಸಿಕ್ಕಿದಾಗಲೇ ಸೀಳಿ ಮುಕ್ಕಿ ಬಿಡಬೇಕಾಗಿತ್ತು. ಈಗೇನು ಮಾಡುವುದು? ಗುರುದೇವರನ್ನಾದರೂ ಕರೆಯುತ್ತೇವೆ. **(ಗುರುದೇವ.... ಗುರುದೇವ.... ಎಂದು ಕೂಗುತ್ತದೆ)**

**ಗುರುದೇವ** : (ಪ್ರವೇಶಿಸಿ) ಯಾಕಯ್ಯಾ ಹೀಗೆ ದೊಡ್ಡ ಗಂಟಲಲ್ಲಿ ಕೂಗಿ ನಮ್ಮ ಧ್ಯಾನ ಭಂಗ ಮಾಡಿದೆ ನಮ್ಮಿಂದೇನಾಗಬೇಕಿತ್ತು?

**ಚಂಡವ್ಯಾಘ್ರ** : ನೋಡಿದಿರಾ ಗುರುದೇವ, ಸ್ವಲ್ಪ ಹೊತ್ತಿಗೆ ನಿಮ್ಮ ಮುಂದೆಯೇ ಭಾಷೆ ಕೊಟ್ಟು ಹೋದದ್ದು ಇನ್ನೂ ಬಂದಿಲ್ಲ. ಒಂದೆರಡು ಕ್ಷಣದಲ್ಲಿ ಬಂದು ಬಿಡುತ್ತೇನೆಂದದ್ದು ಇನ್ನೂ ಪತ್ತೆಯಿಲ್ಲ. ಅದರ ಮಾತನ್ನು ನಂಬಿ ಮೂರ್ಖನಾದೆ. ಕರುಣೆ ತೋರಿಸಬಾರದಿತ್ತು.

**ಗುರುದೇವ** : ಸ್ವಲ್ಪ ತಾಳ್ಮೆಯಿಂದಿರು. ಮಗುವನ್ನು ಸಮಾಧಾನ ಮಾಡಿ ಅದರಿಂದ ಬಿಡಿಸಿಕೊಂಡು ಬರುವುದ ಅಷ್ಟು ಸುಲಭವಲ್ಲ.

ತಾಯಿ ಮಕ್ಕಳ ಸಂಬಂಧ ನಿನಗೆ ಹೇಗೆ ಅರ್ಥವಾಗಬೇಕು!

**ಚಂಡವ್ಯಾಘ್ರ** : ಏನು ಗುರುದೇವ ನನ್ನನ್ನೇ ತಪ್ಪಾಗಿ ಮಾತಾಡುತ್ತೀರಿ. ನನಗೆ ಅರ್ಥವಾಗದಿದ್ದರೆ ನಾನೇಕೆ ಕನಿಕರಿಸಿ ಬಿಡುತ್ತಿದ್ದೆ!

**ಗುರುದೇವ** : ಹಾಗಾದರೆ ತಾಳ್ಮೆಯಿಂದಿರು. ಅದು ಸತ್ಯವಂತ ಹಸು. ಆಡಿದ ಮಾತಿಗೆ ತಪ್ಪುವುದಿಲ್ಲ.

**ಪುಣ್ಯಕೋಟಿ** : (ಪ್ರವೇಶಿಸಿ) ಕ್ಷಮಿಸು ಹುಲಿರಾಯ. ನನ್ನ ಕಂದನನ್ನು, ಸಮಾಧಾನಪಡಿಸಿ, ಬಂಧುಗಳಿಗೆ ಅದನ್ನು ಒಪ್ಪಿಸಿ ಬರಲು ಸ್ವಲ್ಪ ತಡವಾಯಿತು. ನಿಮಗೆ ಸಿಟ್ಟು ಬಂದಿರುವುದರಲ್ಲಿ ತಪ್ಪಿಲ್ಲ. ತೆಗೆದುಕೋ ಅಣ್ಣಯ್ಯ. ಖಂಡವಿದೆ. ಮಾಂಸವಿದೆ. ಗುಂಡಿಗೆಯ ಬಿಸಿ ರಕ್ತವಿದೆ – ಎಲ್ಲವನ್ನೂ ಉಂಡು ಸಂತೃಪ್ತನಾಗು. ಮೊದಲಿಗಿಂತ ಈಗ ಹೆಚ್ಚು ಸಂತೃಪ್ತಿಯಿಂದ ನಿನಗೆ ಒಪ್ಪಿಸಿಕೊಳ್ಳುತ್ತೇನೆ. ನನಗೆ ಮನೆಗೆ ಹೋಗಲು ಅನುಮತಿ ಕೊಟ್ಟೆ. ಇದರಿಂದ ನನ್ನ ಕಂದನನ್ನು ಕಂಡು ಉಣಿಸಿ, ತಣಿಸಿ ಬರಲು ಸಾಧ್ಯವಾಯಿತು. ಮನಸ್ಸಿಗೆ ಇದರಿಂದ ನೆಮ್ಮದಿ ಸಿಕ್ಕಿತು. ಕೊಟ್ಟ ಭಾಷೆಯಂತೆ ನನ್ನನ್ನು ಆಹಾರವಾಗಿಸಿಕೋ (ಗುರುದೇವನ ಕಡೆ ತಿರುಗಿ) ಗುರುದೇವ ನನಗೆ ಸಕಲ ಸನ್ಮಂಗಳಗಳು ಉಂಟಾಗುವಂತೆ ಆಶೀರ್ವದಿಸಿ.

**ಗುರುದೇವ** : ತಾಯಿ, ನಿನ್ನಂಥ ಸತ್ಯವಂತರನ್ನು ವಚನ ಪಾಲಕರನ್ನು ಕಂಡಿಲ್ಲ. ದೇವರು ನಿನಗೆ ಒಳ್ಳೆಯದು ಮಾಡಲಿ. ಸ್ವರ್ಗಪ್ರಾಪ್ತಿಯಾಗಲಿ.

**ಪುಣ್ಯಕೋಟಿ** : ಬಾ ಹುಲಿಯಣ್ಣ. ಬಹಳ ಹಸಿದಿರುವೆ. ಹಸಿದ ಹೊಟ್ಟೆಗೆ ಮತ್ತಷ್ಟು ಹಿಂಸೆ ಕೊಡಬೇಡ. ಬೇಗನೆ ಉಂಡು ಸುಖದಿಂದ ಈ ಅಡವಿಯನ್ನಾಳುತ್ತಿರು.

**ಚಂಡವ್ಯಾಘ್ರ** : ತಂಗಿ, ಅಣ್ಣ ಎಂದು ನನ್ನನ್ನು ಕರೆದ ಮೇಲೆ ನಾನು ನಿನಗೆ ಸಾವನ್ನು ಕೊಡಲೇ. ನಿನ್ನಂತಹ ಸತ್ಯವಂತಳನ್ನು ಅವಿವೇಕಿಯಾಗಿ, ಹಠದಿಂದ, ಸಿಟ್ಟಿನಿಂದ ಕೊಂದು ತಿಂದರೆ ನನಗೆ ರೌರವ ನರಕ ತಪ್ಪಿದ್ದಲ್ಲ. ಇಲ್ಲೀವರೆಗೆ ಎಷ್ಟೊಂದು ಪ್ರಾಣಿಗಳನ್ನು, ಅದರಲ್ಲಿಯೂ ಪವಿತ್ರವಾದ ಹಸುಗಳನ್ನು ಕೊಂದು ಪಾಪಿಯಾಗಿದ್ದೇನೆ. ಈಗ ನಿನ್ನಂತಹ ಸದ್ಗುಣಶೀಲೆ, ಪರಮಪಾವನೆ. ಸತ್ಯವಂತೆಯನ್ನು ಕೊಂದು ಇನ್ನಷ್ಟು ಪಾಪಕ್ಕೆ ಗುರಿಯಾಗಲೇ (ಗುರುದೇವನತ್ತ ನೋಡಿ) ಗುರುದೇವ ನಾ ಹೇಳುತ್ತಿರುವುದು ಸರಿಯಲ್ಲವೇ? ಇಲ್ಲೀವರೆಗೆ ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತವಾಗಿ ಪ್ರಾಣವನ್ನರ್ಪಿಸಬೇಕೆಂದು ಬಯಸುತ್ತೇನೆ. ಅಪ್ಪಣೆಯಾಗಲಿ... ತಂಗೀ ನೀನು ನನ್ನ ಕಣ್ಣ ತೆರೆಸಿದೆ. ಹೋಗು ನಿನ್ನ ಕಂದನನ್ನು ಕೂಡಿ ನೂರ್ಕಾಲ ಬಾಳು.

**ಪುಣ್ಯಕೋಟಿ** : ಇಲ್ಲ.... ಇಲ್ಲ... ಅಣ್ಣಯ್ಯ ನೀನು ಪ್ರಾಣ ಬಿಡಕೂಡದು. ನಾನು ಪ್ರಾಣವನ್ನರ್ಪಿಸಬೇಕೆಂದು ಪ್ರತಿಜ್ಞೆ ಮಾಡಿ ಬಂದಿದ್ದೇನೆ. ನನ್ನ ಪ್ರತಿಜ್ಞೆಗೆ ಭಂಗ ತರಬೇಡ.

**ಚಂಡವ್ಯಾಘ್ರ** : ಅದು ಸಾಧ್ಯವೇ ಇಲ್ಲ. ಬಿಡು. ಬಿಡು (ಎಂದು ಪುಣ್ಯಕೋಟಿಗೆ ಪ್ರದಕ್ಷಿಣೆ ಹಾಕಿ, ಬೆಟ್ಟವೇರಿ ಮೇಲಿಂದ ಜಿಗಿದು ಬೀಳುತ್ತದೆ. ಅದು ಬಿದ್ದ ರಭಸಕ್ಕೆ ಬೆದರಿದ ಪುಣ್ಯಕೋಟಿ. "ಅಣ್ಣಯ್ಯಾ – ಹುಲಿರಾಯ" ಎಂದು ಚೀರಿ ಮೂರ್ಛೆ ಹೋಗುತ್ತದೆ. ಗುರುದೇವ ಅವರಿಬ್ಬರ ಹತ್ತಿರ ಬಂದು ನೋಡುತ್ತಾನೆ.)

**ಗುರುದೇವ** : ಎಂಥ ತ್ಯಾಗವಿದು. ಮನುಷ್ಯರಿಗೂ ಸಾಧ್ಯವಾಗದ ಈ ಸ್ನೇಹ ಸಂಬಂಧಗಳು ಈ ಮೌಲ್ಯಗಳು ಈ ಪ್ರಾಣಿಗಳಲ್ಲಿ ಕಾಣುತ್ತಿರುವೆ. ಸೃಷ್ಟಿಯಲ್ಲಿಯೇ ವಿಚಿತ್ರವಾದ

ಘಟನೆಯಿದು. ಪುಣ್ಯಕೋಟಿಯಲ್ಲಿ ಸ್ವಲ್ಪ ಉಸಿರಾಟ ಕಾಣುತ್ತದೆ. ಪುಣ್ಯಕೋಟಿ, ತಾಯಿ.... ಏಳು.... ಏಳು ಎದ್ದೇಳು.

**ಪುಣ್ಯಕೋಟಿ** : (ಕಣ್ಣು ಬಿಟ್ಟು) ಗುರುದೇವ. ನಾನು ಇನ್ನೂ ಸಾಯಲಿಲ್ಲವೇ? ಇದೇನು ನನ್ನ ಹುಲಿಯಣ್ಣ ಹೀಗೆ ನಿಶ್ಚಲನಾಗಿ ಬಿದ್ದಿದ್ದಾನೆ.

**ಗುರುದೇವ** : ತಾಯೆ ನಿನ್ನ ಸತ್ಯಕ್ಕೆ ಮೆಚ್ಚಿ ನೀಡಿದ ಕಾಣ್ಕೆ ಇದು. ಈ ಲೋಕ ತ್ಯಜಿಸಿ ಸತ್ಯಲೋಕ, ಸ್ವರ್ಗಲೋಕ ಸೇರಿದ್ದಾನೆ.

**ಪುಣ್ಯಕೋಟಿ** : ಇಲ್ಲ ಗುರುದೇವ. ನನಗಾಗಿ ತಾನು ಪ್ರಾಣ ಬಿಡುವುದು ಅನ್ಯಾಯ. ಹೇಗಿದ್ದರೂ ನಾನು ಹುಲಿ ಬಾಯಿಗೆ ಆಹಾರವಾಗಿ ಸಾವನ್ನಪ್ಪುತ್ತೇನೆಂದು ಹೇಳಿಯೇ ಬಂದಿದ್ದೇನೆ. ಇಂತಹ ಅಣ್ಣನಿಗೆ ತಕ್ಕ ತಂಗಿ ಎನಿಸಿಕೊಳ್ಳಬೇಕಾದರೆ ನಾನೂ ಸಾಯಲೇಬೇಕು. ಅಪ್ಪಣೆ ಕೊಡಿ ಗುರುದೇವ (ಎಂದು ಹೇಳುತ್ತಾ ಬೆಟ್ಟವೇರಿ ಬೀಳಲು ಹೊರಡುತ್ತದೆ. ಅಷ್ಟರಲ್ಲಿ ಅಶರೀರವಾಣಿ ಕೇಳಿಸುತ್ತದೆ.

**ಅಶರೀರವಾಣಿ**: ಪುಣ್ಯಕೋಟಿ, ತಾಯೆ ನಿಲ್ಲು. ಆತುರಪಡಬೇಡ. ನಿನ್ನ ಅಣ್ಣ ಪುಣ್ಯಲೋಕದಲ್ಲಿ ಸಂತೋಷವಾಗಿದ್ದಾನೆ. ನೀನು ಹೀಗೆ ಅನಾಹುತ ಮಾಡಿಕೊಂಡರೆ. ಅಲ್ಲಿದ್ದೂ ಅವನು ದುಃಖಪಡುವಂತಾಗುತ್ತದೆ. ಹೊರಡು ನಿನ್ನ ಪುರಕ್ಕೆ. ನಿನ್ನ ಶಿಶು ನಿನಗಾಗಿ ಅಳುತ್ತಿದೆ. ನಿನ್ನ ಬಂಧು ಬಾಂಧವರ, ನಿನ್ನೊಡೆಯನ ಚಿಂತೆ, ಕಳವಳಗಳನ್ನು ದೂರ ಮಾಡು. ನಿನ್ನ ಸತ್ಯ ನಿಷ್ಠೆಯಿಂದ ಹೀಗೆ ಕಣ್ಣು ತೆರೆಸಿದ ಕತೆ ಜಗದ್ವಿಖ್ಯಾತವಾಗುವುದು. ಹೋಗು ತಾಯಿ ಹೋಗು.

* * *

## ದೃಶ್ಯ – 5

**(ಪುಣ್ಯಕೋಟಿ ಸಂತೋಷದಿಂದ ಹಾಡುತ್ತಾ ಬರುವುದು)**

ಕಂದಯ್ಯಾ ಕಂದಯ್ಯಾ
ಎಲ್ಲಿಹೆ ಬೇಗದಿ ಬಾರಯ್ಯ
ದಯದಿಂದೆನ್ನನು ಹುಲಿಯಣ್ಣ
ನಿನ್ನನು ಸೇರಲು ಕಳಿಸಿಹನಣ್ಣ
ಬಾರೋ ಕಂದ ಕೆನೆಯುತ ಚಂದ
ಸುಖವ ನೀಡು ನಿನ ಅಪ್ಪುಗೆಯಿಂದ
ಅಕ್ಕಗಳಿರಾ ಅಮ್ಮಗಳಿರಾ
ಬನ್ನಿರಿ ಬೇಗ ಬಂದಿಹೆ ನೀಗ
ದೈವವೊಲಿದು ಕಳಿಸಿಹುದು
ನಿಮ್ಮೊಡ ಬಾಳನು ಇತ್ತಿಹುದು
ಹುಲಿರಾಯ ಹುಲಿರಾಯನಲ್ಲ
ಕ್ರೂರ ಹಿಂಸಕನಲ್ಲ
ಲೋಕದಿ ಸತ್ಯದ
ಹಿರಿಮೆಯನರುಹಲು
ತನ್ನನೆ ತಾನು ಬಲಿಗೊಟ್ಟಿಹನು

ಒಡ ತಂಗಿಯ ಬಾಳನು
ಬೆಳಗಿಹನು; ಸುಖವಿತ್ತಿಹನು
**(ಎಲ್ಲ ಹಸುಗಳೂ ಕರುಗಳೂ ಬಂದು ಪುಣ್ಯಕೋಟಿಯನ್ನು ಸುತ್ತುಗಟ್ಟುತ್ತವೆ.)**

**ಎಲ್ಲ ಹಸುಗಳು :** ಪುಣ್ಯಕೋಟಿ ತಾಯೆ ಬಂದೆಯಾ, ಪ್ರಾಣವೆಂತೋ ಉಳಿಸಿಕೊಂಡೆಂಯಾ, ಎಂಥ ಅಚ್ಚರಿ! ಹುಲಿಯು ಬಾಯಿಂದ ತಪ್ಪಿಸಿಕೊಂಡು ಹೇಗೆ ಬಂದೆಯೇ?.... ನಿಜವಾಗಿಯೂ ನೀನು ಪುಣ್ಯವಂತೆಯೇ!!

**ಪುಣ್ಯಕೋಟಿ :** ಅಕ್ಕಗಳಿರಾ, ಅಮ್ಮಗಳಿರಾ. ನಾ ಮತ್ತೆ ಹೋದದ್ದೇ, ಹುಲಿರಾಯನ ಮನಸ್ಸು ಕರಗಿಸಿತು. ನನ್ನ ಸತ್ಯವಾಕ್ಯಕೆ ಮೆಚ್ಚಿ ನನ್ನಂಥವಳನ್ನು ಕೊಂದು ಪಾಪ ಮಾಡುವುದು ಬೇಡವೆಂದು ತಾನೇ ಪ್ರಾಣಕೊಟ್ಟ. ನಾನೂ ಸಾಯಬಯಸಿದೆನಾದರೂ ಅಶರೀರವಾಣಿಯೊಂದು, ಸಾಯಬೇಡವೆಂದೂ ಹುಲಿರಾಯನಿಗೆ ಸದ್ಗತಿ ಸಿಕ್ಕಿ ಸಂತೋಷದಿಂದ ಇರುವನೆಂದೂ ಹೇಳಿತು. ನಾನು ಸಾಯುವುದರಿಂದ ಅವನಿಗೆ ದುಃಖವಾಗುವ ಕಾರಣ ಸಾಯಬಾರದೆಂದೂ, ಹಿಂತಿರುಗಿ ನನ್ನ ಕಂದ, ಬಂಧು ಬಾಂಧವರ ಜೊತೆ ಸುಖದಿಂದ ಇರಬೇಕೆಂದೂ ಆದೇಶಿಸಿತು. ಅದಕ್ಕಾಗಿ ನಾನು ಹೀಗೆ ತಿರುಗಿ ಬಂದುಬಿಟ್ಟೆ.

**(ಹಸುಗಳೆಲ್ಲಾ ಪುಣ್ಯಕೋಟಿಯ ಸುತ್ತ ಹಾಡುತ್ತಾ ಪ್ರದಕ್ಷಿಣೆ ಹಾಕುತ್ತವೆ)**

ಪುಣ್ಯಕೋಟಿಯೆ ಪುಣ್ಯವಂತೆಯೆ
ಏಸು ಪುಣ್ಯವ ಎಸಗಿಹೆ
ಎಮ್ಮ ಒಡಹುಟ್ಟಿದವಳು ನೀನೆನೆ
ಎನಿತು ಧನ್ಯರೋ ನಾವ್‌ಗಳು

ಮೃತ್ಯುಮುಖದಿಂ ತಪ್ಪಿ ತಾಯಿಯ
ಮರಳಿ ಪಡೆದಿರೆ ಕಂದನು
ಜನ್ಮಜನ್ಮಾಂತರದ ಪುಣ್ಯವು
ಅವನದಾಗಿದೆ ಸತ್ಯವು
ಇರಲಿ ತಾಯೆ ನಿನ್ನ ಹರಕೆಯು
ಎಮ್ಮಮೇಲಿರಲೆಂದಿಗೂ
ಬಾಳದೀವಿಗೆ ನೀನೆ ನಮಗೆ
ನಿನ್ನ ಪಾದಕೆ ನಮಿಪೆವು
ನಿನ್ನ ಪಾದಕೆ ನಮಿಪೆವು

* * *

## ದೃಶ್ಯ – 1

(ಒಂದು ದೊಡ್ಡ ಆಟದ ಬಯಲು, ಮಕ್ಕಳೆಲ್ಲರೂ ಕುಣಿದು ಕುಪ್ಪಳಿಸಿ ಆಡುತ್ತಿದ್ದಾರೆ. ವಿಧವಿಧವಾದ ಆಟಗಳನ್ನು ಆಡುತ್ತಿದ್ದಾರೆ. ಲಗ್ಗೋರಿ, ರತ್ತೋ ರತ್ತೋ, ಕಣ್ಣಾಮುಚ್ಚಾಲೆ ಇತ್ಯಾದಿ. ರಂಗದ ಬದಿಯಿಂದ ಕಾಗೆಯೊಂದು ಕುಪ್ಪಳಿಸುತ್ತ ರೆಕ್ಕೆಗಳನ್ನು ಫಡಫಡಿಸುತ್ತಾ ಬರುತ್ತದೆ)

**ಕಾಗೆ** : 'ಗೆಳೆಯರೇ ನಾನೂ
ಆಡಲು ಬರಲೇ
ಬೆಳಗಿನಿಂದಲೂ
ಬೇಸರ ಬಂದಿದೆ
ಆಡಲು ಯಾರೂ
ಗೆಳೆಯರು ಇಲ್ಲ
ನಿಮ್ಮೊಡನಾಡಲು
ಬಂದಿರುವೆ
ಬಗೆಬಗೆಯಾಟದಿ,
ನಾನೂ ಸೇರುವೆ' – ಎನ್ನುತ್ತಾ ಕಾ। ಕಾ। ಕಾ
ಎಂದು ಕೂಗುತ್ತದೆ.
(ಆಡುತ್ತಿದ್ದ ಹುಡುಗರು ಕಾಗೆಯತ್ತ ನೋಡುವರು, ನಗುವರು)

ಸೋಮು : (ಆಶ್ಚರ್ಯದಿಂದ) ಏನಂದೆ ಕಾಗಣ್ಣ, ನೀನು ನಂಜೊತೆ ಆಡಬೇಕಂತೀಯ?

ಕಾಗೆ : ಹೌದು ಗೆಳೆಯಾ, ಬೆಳಗಿನಿಂದ ಬೇಜಾರಾಗಿದೆ. ಗೆಳೆಯರೇ ಸಿಕ್ಕಿಲ್ಲ. ನನ್ನನ್ನೂ ನಿಂಜೊತೆ ಸೇರಿಸಿಕೊಳ್ಳಿ

ಸೋಮು : ಛಿ! ಛೀ! ನೀನು ನಂಜೊತೆ ಆಡೋಕೆ ಬರ್ತೀಯಾ, ಸಾಧ್ಯವಿಲ್ಲಪ್ಪ. ನಿನ್ನನ್ನು ಮುಟ್ಟಿಸಿಕೊಂಡರೆ ಮೈಲಿಗೆಯಾಗುತ್ತೆ.

ರಾಮು : ನೀನೊಂದು ಅಪಶಕುನದ ಹಕ್ಕಿ

ಶಿವು : (ವ್ಯಂಗ್ಯವಾಗಿ) ಆಹಾಹಾ! ಆ ಬಣ್ಣ ನೋಡು; ಥೂ! ನಿನ್ನ ಕಂಡರೇನೇ ಅಸಹ್ಯ ಆಗುತ್ತದೆ.

ಸೀತೂ : ಲೋ ಹಾಗೆಲ್ಲ ಅನ್ನ ಬೇಡ್ರೋ ಪಾಪ ಬರುತ್ತೆ!

ರಾಮು : ಲೇ ಸೀತೂ ನೀ ಸುಮ್ಮನಿರೆ, ಇದು ದರಿದ್ರದ ಹಕ್ಕಿ ಕಣೆ.

ಲಂಬೂ : ಅಮ್ಮ ಹೇಳ್ತಿರ್ತಾರೆ, ಕಾಗೆ ಮನಗೆ ಬಂದ್ರೆ ಕೆಟ್ಟುದೂಂತ. ಯಾರಾದ್ರೂ ಸಾಯ್ತಾರಂತೆ!

ದಾನಿ : ಎಂಜಲು ತಿನ್ನೋ ಹಕ್ಕಿ, ನಿನಗೂ ಆಟಬೇಕೆ?

ಸೋಮು : ಅಷ್ಟೇ ಅಲ್ಲ, ಒಂಟಿ ಕಣ್ಣಿನ ಶುಕ್ರಾಚಾರ್ಯ ಕೂಡ! (ಅಹ್ಹಹ್ಹ - ನಗು).

ಕಾಗೆ : ಗೆಳೆಯರೇ ನೀವು ಹೀಗೆಲ್ಲ ನನ್ನನ್ನು ಅವಮಾನ ಮಾಡಬಾರದು. ಇದು ದೇವರು ಕೊಟ್ಟ ರೂಪ! ನಾನೇನು ಮಾಡ್ಲಿ?

ರಂಗ : ಹಾಗಂತ ಅಯ್ಯೋ ಪಾಪ ಅಂದು ನಂಜೊತೆ ಸೇರಿಸ್ಕೋಬೇಕಾ? ಹೋಗೋ ಹೋಗೋ.

ಕಾಗೆ : ಹೌದು! ನಾನು ನಿಮಗೆ ಏನೂ ಮಾಡೊಲ್ಲ. ನೀವು ಹೇಳಿದ ಕೆಲ್ಸ ಮಾಡ್ತೀನಿ. ನನಗೂ ಆಡೋಕೆ ಸೇರಿಸ್ಕೊಳ್ಳಿ ಗೆಳೆಯರೇ.

ಶಿವು : ಸೋಮು, ಖಂಡಿತಾ ಇದನ್ನು ನಂಜೊತೆ ಸೇರಿಸ್ಕೋಬೇಡ.

ರಂಗ : ನೋಡೋಕೆ ಚಂದ ಇಲ್ಲ, ಬಣ್ಣದ ಪುಕ್ಕ ಇಲ್ಲ.

ರಾಮು : ಹಂಸದ ಬಣ್ಣ ಇಲ್ಲ. ಇದರ ಹಾಗೆ ನಡೆಯೋಕೆ ಬರೊಲ್ಲ.

ಶಿವು : ನವಿಲಿನ ಹಾಗೆ ಕುಣಿಯೋಕೂ ಬರಲ್ಲ.

ದಾನಿ : ಕೋಗಿಲೆ ಹಾಗೆ ಹಾಡೋಕೂ ಬರೊಲ್ಲ.

ಸೋಮು : ಚಿಟ್ಟೆ ಬಣ್ಣ ಇಲ್ಲ

ರಾಮು : ಗಿಳಿ ಹಾಗೆ ಜಾಣಾನೂ ಅಲ್ಲ

ಸೋಮು : ತಗೋಪ್ಪ, ಈ ಶನಿಮುಂಡೇನೂ ನಂಜೊತೆ ಆಡುತ್ತಂತೆ (ಎಲ್ಲರೂ ನಗುವರು)

ಕಾಗೆ : (ಕೋಪದಿಂದ) ನನ್ನನ್ನು ಆಟಕ್ಕೆ ಸೇರಿಸ್ಕೋತೀರ ಇಲ್ವ?

ಎಲ್ಲರೂ : ಇಲ್ಲ! ಇಲ್ಲ! ಇಲ್ಲ!

ಕಾಗೆ : ತಡೀರಿ ಮುಂಡೇವೆ ನಿಮಗೆ ಮಾಡ್ತಿನಿ. ನೀವು ನನಗೆ ಏನೆಲ್ಲ ಬೈದಿರಿ. ನಿಮ್ಮನ್ನು ಸುಮ್ನೆ ಬಿಡೊಲ್ಲ. ಈಗ ನೋಡ್ತಿರಿ...
ಎಂದು ರಭಸವಾಗಿ ಮಕ್ಕಳ ಮೇಲೆ ಎರಗುತ್ತೆ.
ನಿಮ್ಮ ಕಣ್ಣು ಕುಕ್ತೀನಿ
ನಿಮ್ಮ ಬೆನ್ನು ಹರಿತೀನಿ
ನಿಮ್ಮ ತಲೆ ಮೇಲೆ ಹಾರ್ತೀನಿ
ನಿಮ್ಮ ಮನೆ ಹೋಗಿರ್ತೀನಿ....
ಸಾಯ್ರೋ ಸಾಯ್ರೋ'
**(ಎಂದು ಮೇಲಿಂದ ಮೇಲೆ ಆಕ್ರಮಣ ಮಾಡುತ್ತೆ)**

ಎಲ್ಲರೂ : (ಗಾಭರಿಯಿಂದ) ಅಯ್ಯಯ್ಯೋ ಬನ್ರಪ್ಪೋ! ಬನ್ನಿ.... ಈ ದರಿದ್ರದ್ದು ನಮ್ಮನ್ನು ಸಾಯಿಸಿ ಬಿಡುತ್ತೆ.

ದಾನಿ : ಏಯ್ ಯಾಕ್ರೋ ಹೆದರ್ಕೋತೀರಿ. ಕಲ್ಲು ತಗೊಂಡು ಒಗೀರೋ!

(ಎಂದು ಕಲ್ಲುಗಳನ್ನು ಆರಿಸಿ ಕಾಗೆಯ ಕಡೆ ಎಸೆಯುವರು. ಕಾಗೆ ಹೆದರಿ ಹಾರಿ ಹೋಗುವುದು)

(ದಟ್ಟವಾದ ಕಾಡು, ಹಕ್ಕಿಗಳ ಕಲರವ. ದೂರದಿಂದ ಹಲವು ಪ್ರಾಣಿಗಳ ದನಿಗಳು, ಹರಿವ ನದಿಯ ಝುಳು ಝುಳು, ಸುಂದರವಾದ ಮರಗಳು, ಬಣ್ಣ ಬಣ್ಣದ ಹೂಗಳು, ಗಿಳಿ, ಕೋಗಿಲೆ, ಹಂಸ, ಚಿಟ್ಟೆಗಳು ಕುಣಿಕುಣಿದಾಡುತ್ತ ನಲಿಯುತ್ತಾ ಬರುವುವು)

ಒಟ್ಟಿಗೆ : ಏನು ಚೆಲುವಿದು
ಎದೆಯ ತುಂಬಿದೆ ನಲಿವಿದು
ನಗೆಯ ನುಕ್ಕಿಸಿ
ಮುದವ ಹೊಮ್ಮಿಸಿ
ಬನದ ರಾಣಿಯು
ಬರುವಳು
ಕನಸು ನೂರನು
ತರುವಳು
ಸವಿಯ ಸಾವಿರ
ಉಣಿಪಳು – ಲಾಲಲಾಲಲಾಲಲಾ

(ದೂರದಿಂದ ಕಾಗೆಯ ಕೂಗು. ನೋವಿನಿಂದ ಕೂಡಿದೆ)

ನವಿಲು : ನಿಲ್ಲಿ ಗೆಳೆಯರೆ. ಈ ಸಂತಸದ ಕುಣಿತದಲ್ಲಿ ಕಾಗಣ್ಣನ ಕೂಗು ಏಕೋ ಅಪಶೃತಿಯಂತಿದೆ. ಬನ್ನಿ ಗೆಳೆಯರೆ ಕಾಗಣ್ಣನನ್ನೂ ನಮ್ಮೊಡನೆ ಸೇರಿಸಿಕೊಳ್ಳಬೇಕಿತ್ತಲ್ಲವೇ?

ಹಂಸ : ಅಯ್ಯೋ ಈ ಕಾಗಣ್ಣನೇಕೆ ನಮ್ಮ ಮಧ್ಯದಲ್ಲಿ? ಅದೊಂದು ಗೂಬೆ ತರವೇ! ನಮ್ಮ ಜೊತೆ ಬಂದರೆ ಅಪಶಕುನಾನ ಬೆನ್ನಿಗೇರಿಸಿಕೊಂಡು ಹೊರಟ ಹಾಗೆ.

ನವಿಲು : ಕೂಡದು ಕೂಡದು ಹಂಸವೇ! ಕಾಗೆಯೇನು ಕೋಗಿಲೆಯೇನು? ಅದೂ ಕೂಡ ನಮ್ಮ ಜೊತೆ

ವನಮಹೋತ್ಸವಕ್ಕೆ ಬರಲಿ. ಪಾಪ, ಇನ್ನೊಬ್ಬರ ವಿಚಾರದಲ್ಲಿ ಹೀಗೆಲ್ಲ ಅಪಶಬ್ದಗಳನ್ನು ಆಡಬಾರದು.

ಕೋಗಿಲೆ : ಹೌದೌದು, ನವಿಲಣ್ಣ ಹೇಳೋ ಮಾತು ನಿಜವೇ. ನಾನೂ ಕಾಗಣ್ಣ ಬಣ್ಣಗಳು ಒಂದೇ ಅಲ್ಲವೇ? ನಾನು ಬರಬಹುದಾದರೆ ಅವನೂ ಯಾಕೆ ಬರಬಾರದು?

ಹಂಸ : ನಿನಗೇಂದ್ರೆ ದೇವರು ಒಳ್ಳೆ ಕಂಠ ಕೊಟ್ಟಿದ್ದಾನೆ. ನಿನ್ನ ಕಛೇರಿ ಇದ್ದರೆ ಕಾಡಿಗೆ ಕಾಡೇ ಬಂದು ಸೇರುತ್ತೆ.

ಕೋಗಿಲೆ : ಪಾಪ ಕಾಗಣ್ಣ, ಕಾಗಣ್ಣ ಕಾಗಕ್ಕ ಕಪ್ಪಾದ್ರೂಂತ ಅವರನ್ನು ದೂರ ಇಡೋದು ಸರಿ ಇಲ್ಲ. ಅವರು ಮುಗ್ಧರು. ನನ್ನ ಮೊಟ್ಟೆಗಳನ್ನು ಕಾವು ಕೊಟ್ಟು ಮರಿ ಮಾಡಿ ನಂತಾವ ಬಿಡ್ತಾರೆ. ಅವರ ಆ ಉಪಕಾರ ಮರೆಯೋಕೆ ಸಾಧ್ಯವೇ?

ಹಂಸ : ಸರಿ ಸರಿ ನಾನು ಒಂದು ಮಾತು ಹೇಳಿದರೆ ಇಷ್ಟು ದೊಡ್ಡ ಪುರಾಣ ತೇಗೀತೀರಿ. ನನಗೇನಾಗಬೇಕು. ಆದರೆ ನಂಜೊತೆಗೆ ಮಾತ್ರ ಅದು ಬರಬಾರದು. ಅದರ ಒಕ್ಕಣ್ಣು, ಬಣ್ಣ, ಧ್ವನಿ ಕೇಳಿದ್ರೇನೇ ನನಗೆ ಅಸಹ್ಯೆ ಆಗುತ್ತೆ.

ನವಿಲು : ನೋಡು ನಮ್ಮ ನಮ್ಮ ರೂಪ ನಾವು ಪಡೆದು ಬಂದದ್ದು; ದೇವರು ಕೊಟ್ಟದ್ದು. ನಮಗೆ ಹೀಗೇ ಬೇಕು ಹಾಗೆ ಬೇಕೂಂದ್ರೆ ಆಗುತ್ತಾ?

ಹಂಸ : ಸರಿಯಣ್ಣ ನಿಮ್ಮಿಷ್ಟ. ನಾನ್ಯಾಕೆ ಬೇಡಾ ಅನ್ನಲಿ. ಬೇಕಾದರೆ ಕಾಗೆ ಜೊತೆಗೆ ಗೂಬೇನೂ ಕರ್‍ಕೊಳ್ಳಿ ನಾನು ಬೇಡ ಅನ್ನೊಲ್ಲ.

ಕೋಗಿಲೆ : ಹಂಸಕ್ಕ ಸಿಟ್ಟು ಮಾಡ್ಕೋಬೇಡ. ಆ ಧ್ವನೀನ ಸ್ವಲ್ಪ ಕೇಳು. ಕಾಗಣ್ಣ ಚಿಂತೆಯಿಂದ ಇರೋ ಹಾಗಿದೆ. ಹೋಗಿ ವಿಚಾರಿಸೋಣ ಬನ್ನಿ.

ನವಿಲು : ಕೋಗಿಲೆ ಕೋಗಿಲೆ ಸ್ವಲ್ಪ ಮುಂದೆ ಹೋಗಿ ಕಾಗಣ್ಣನನ್ನು

ಕರೆದು ತಾರೆಯಾ?

ಕೋಗಿಲೆ : ಕಾಗಣ್ಣ ಕಾಗಣ್ಣ ಎಲ್ಲಿದ್ದೀಯ? ನಾನು, ನವಿಲಣ್ಣ, ಹಂಸ, ಎಲ್ಲಾ ಬಂದಿದ್ದೇವೆ. ನಮ್ಮ ಜೊತೆ ವನಮಹೋತ್ಸವಕ್ಕೆ ಬರಬೇಕಂತೆ. ಎಲ್ಲಿದ್ದೀಯ... ಕಾಣಿಸ್ತಾ ಇಲ್ಲ. (ಸುತ್ತಾಡಿ ಹುಡುಕಾಡಬೇಕು.)

(ಸ್ವಗತ) ಈಗ ತಾನೇ ಕೂಗಿದ ಸದ್ದಾಯ್ತು. ಇಷ್ಟರಲ್ಲಿ ಎಲ್ಲಿ ಹೋಯ್ತಪ್ಪ! ಇದರ ಬುದ್ಧೀನೇ ಇಷ್ಟು, ಅಯ್ಯೋ ಪಾಪ ಜೊತೆ ಸೇರಿಸಿಕೊಂಡು ಸಂತೋಷ ಪಡೋಣಾಂದ್ರೆ ಇದಕ್ಕೇನಪ್ಪ ಇಷ್ಟೊಂದು ಜಂಬ!

**(ಅಷ್ಟರಲ್ಲಿ ಎಲ್ಲ ಪಕ್ಷಿಗಳೂ ಚಿಟ್ಟೆಯೂ ಅಲ್ಲಿಗೆ ಬರುತ್ತವೆ)**

ನವಿಲು : ಏನಾಯ್ತು ಕೋಗಿಲೆ, ಕಾಗಣ್ಣ ಕಾಣಿಸಿಕೊಂಡನೇನು?

ಕೋಗಿಲೆ : (ನಿರಾಸೆಯಿಂದ) ಇಲ್ಲ ನವಿಲಣ್ಣ. ನನಗಂತೂ ಕೂಗಿ ಕೂಗಿ ಗಂಟಲು ಬಿದ್ದುಹೋಯ್ತು.

ನವಿಲು : ಹೋಗಲಿ ಬಿಡು ನಾವೆಲ್ಲರೂ ಬೇರೆ ಬೇರೆ ದಿಕ್ಕುಗಳಲ್ಲಿ ಹುಡುಕೋಣ.

**(ಎಲ್ಲರೂ ಬೇರೆ ಬೇರೆ ದಿಕ್ಕಿಗೆ ತಿರುಗಿ ಕಾಗಣ್ಣ, ಕಾಗಣ್ಣ ಎಂದು ಕರೆಯುವರು.)**

ಕೋಗಿಲೆ : ಹೋಗಲಿ ಬಿಡಿ ಗೆಳೆಯರೇ. ನಾವೆಲ್ಲರೂ ಪ್ರೀತಿಯಿಂದ ಹಾಡಿ ಕರೆಯೋಣ.

ಹಾಡು : ಗೆಳೆಯಾ ಗೆಳೆಯಾ
ಕಾಗಣ್ಣ
ಬಾರೋ ಜೊತೆಗೆ
ಬಾರಣ್ಣ
ಒಂದೇ ಜಾತಿ
ಒಂದೇ ಕುಲ
ರೆಕ್ಕೆ ಮಕ್ಕಳು ನಾವಣ್ಣ॥

ಬನದೇವಿಯ
ಮಡಿಲಿನಾ
ಮುದ್ದು ಕುಡಿಗಳು ಹೌದಣ್ಣ ॥
ಮುನಿದೆಯೇನು
ನೊಂದೆಯೇನು
ನುಡಿಯಲಾರೆಯಾ
ನಮ್ಮ ಜೊತೆಯ
ಆಟಕ್ಕಾಗಿ ಇಳಿದು
ಬಾರೆಯಾ
ಬಾರೊ ಬಾರೊ ಗೆಳೆಯನೇ
ಹಂಚು ನಿನ್ನ ನೋವೇನೇ॥

**(ಕಾಗೆ ನಿಧಾನವಗಿ ನಡೆದು ಬರುತ್ತದೆ. ಗೆಳೆಯರ ಮುಖದಲ್ಲಿ ಗೆಲುವು ಕಾಣುತ್ತದೆ.)**

**ನವಿಲು** : (ಗೆಲುವಿನಿಂದ) ಅಬ್ಬ ಇಷ್ಟು ಹೊತ್ತಾದ ಮೇಲೆ ನಮ್ಮ ಮಾತು ನಿನ್ನ ಕಿವಿಗೆ ಬಿತ್ತಾ? ಬಾ ಗೆಳೆಯಾ ವನಮಹೋತ್ಸವಕ್ಕೆ ಹೋಗೋಣ. ಎಲ್ಲರೂ ಕೂಡಿ ಆಡೋಣ.

**ಕಾಗೆ** : (ನೋವಿನಿಂದ)
ಕರೆದಿರೆನ್ನನು ಗೆಳೆಯರೇ
ನಿಮ್ಮ ಪ್ರೀತಿಗೆ ವಂದನೆ
ಕ್ಷಮಿಸಿ ಬಾರೆನು
ನಿಮ್ಮ ಜೊತೆಗೆ
ಸಾಯ ಬೇಕಿದೆ
ಇನ್ನ ನನಗೆ
ಬೇಡವಾಗಿದೆ ಜೀವವು
ಶೂನ್ಯವಾಗಿದೆ ಭಾವವು ॥

ಕೋಗಿಲೆ : ಇನಿತೇಕೆ ಬೇಸರ. ಏನಾಯಿತು ಹೇಳೋ ಕಾಗಣ್ಣ!
ನಾವಿಲ್ಲವೆ ನಿನಗೆ ಹೇಳಣ್ಣ.

ಕಾಗೆ : ಹೇಳಲೇನಿದೆ ಗೆಳೆಯರೆ
ನನ್ನ ಕರ್ಮವೆ ನನಗಿದೆ.
ಏನಿದೆನ್ನಲಿ ಚೆಲುವು ಸೊಗಸು
ಹೇಳಿ ಗೆಳೆಯರೆ ಹೇಳಿರಿ.
ಬಣ್ಣವೆನ್ನಲೆ, ಕಾಡು ಕಪ್ಪು
ಕಣ್ಣ ಬೆಡಗೇ
ಒಂಟಿ ಕಣ್ಣು
ದನಿಯ ಇಂಪಿನ
ಸೊಗದ ಮಾತೇ
ಕರ್ಣ ಕರ್ಕಶ ಹೇವವು
ಕರೆಯಲಾರರು
ಮನುಜ ಮಕ್ಕಳು
ಕಂಡರೆಸೆವರು
ಕಲ್ಲನು
ಹಾಡೆನೆಂದರೆ
ಕೇಡ ಭೀತಿಗೆ ಬಿಡದೆ
ನನ್ನ ಕೊಲುವರು
ಎಸೆವ ಎಂಜಲ
ಹೆಕ್ಕಿ ತಿನುವ
ಹೀನ ಬಾಳಿನ ನೋವಿದು
ನಿಮ್ಮ ಅರಿವಿಗೆ ಬಾರದು ॥

ನವಿಲು : ಇಷ್ಟಕ್ಕಾಗಿ ಅಳುವರೆ. ಸಾವ ಬಯಕೆಯ ತಳೆವರೇ?....
ಪಡೆದದ್ದನ್ನು ಆನಂದದಿಂದ ಅನುಭವಿಸಬೇಕು ಗೆಳೆಯಾ.

ಕಾಗೆ : ನವಿಲಣ್ಣ ನೀನು ಎಷ್ಟೇ ಸಮಾಧಾನ ಹೇಳಿದರೂ ನನಗೆ ಸಮಾಧಾನ ಆಗ್ತಿಲ್ಲ. ನಾನೂ ನಿಮ್ಮಲ್ಲಿ ಒಬ್ಬರಂತೆ ಆಗಬೇಕು. ಇಲ್ಲವೇ ಸಾಯಬೇಕು.

ಹಂಸ : (ಸ್ವಗತ) ಆ ಕಡೆ ಸಾಯಲಿ ಪೀಡೆ ತಪ್ಪುತ್ತೆ.

ನವಿಲು : ನಮ್ಮಲ್ಲಿ ಒಬ್ಬರಂತೆ ಆಗಬೇಕು. ನಿನ್ನ ಆಸೆಯೇನೋ ಚೆನ್ನಾಗಿದೆ. ಆದರೆ ಪ್ರತಿಯೊಬ್ಬರಿಗೂ ಅವರವರ ಕಷ್ಟ ಇದ್ದೇ ಇರುತ್ತೆ. ದೂರದ ಬೆಟ್ಟ ನುಣ್ಣಗೆ ಅಂತ ನೀನು ಅಂದ್ಕೊಂಡಿದ್ದಿ. ನಮ್ಮೆಲ್ಲರ ಜನ್ಮದ ಅನುಭವಗಳು ನಿನಗೆ ಆಗಿಲ್ಲ ಅದಕ್ಕೇ ನೀನು ನಾವೆಲ್ಲ ಈ ಹುಟ್ಟುಗಳನ್ನು ಪಡೆದು ಸುಖವಾಗಿದ್ದೀವಿಂತ ತಿಳಿದಿದ್ದೀಯ. ಬೇಕಾದರೆ ನಮ್ಮ ಗಿಳಿಯಣ್ಣನನ್ನು ಕೇಳು. ಅವನು ಮಾತಾಡುವಷ್ಟು ಚೆನ್ನಾಗಿ ನಮಗೆ ಮಾತಾಡೋಕೆ ಬರೋದಿಲ್ಲ. (ಗಿಳಿಯ ಕಡೆ ತಿರುಗಿ) ಯಾಕೆ ಸುಮ್ಮನಿದ್ದೀ ಗಿಳಿಯಣ್ಣ ನೀನು ಬಾಯಿ ಬಿಟ್ಟರೆ ಮುತ್ತಿನಂತೆ ಉದುರೋ ನಿನ್ನ ಮಾತಿಗೆ ಪ್ರಪಂಚ ಕುಣಿದಾಡುತ್ತೆ ಖುಷಿ ಪಡುತ್ತೆ.

ಗಿಳಿಯಣ್ಣ : ನವಿಲಣ್ಣ ಹೇಳೋದೆಲ್ಲ ಸರಿ ಕಾಗಣ್ಣ. ನಿನಗೆ ನಮ್ಮ ನಮ್ಮ ಕಷ್ಟ ಗೊತ್ತಾಗೋದಿಲ್ಲ. ನನಗಿರೋ ಬಣ್ಣ, ಮಾತಾಡೋ ಜಾಣ್ತನ ನಿನಗೆ ಕರುಬುವ ಹಾಗೆ ಅನಿಸಬಹುದು. ಆದರೆ ಇದೆಲ್ಲ ಇರೋದರಿಂದ ನಾವು ಹೆಜ್ಜೆ ಹೆಜ್ಜೆಗೂ ಎದುರಿಸೋ ಕಷ್ಟ ನಿನಗೆ ಗೊತ್ತಾಗೊಲ್ಲ.

ಕಾಗೆಯಣ್ಣ : ಹೌದಪ್ಪ ನಿಮಗೆ ಬೇಕಾದಷ್ಟು ಬಯಸಿದ್ದು ಎಲ್ಲಾ ಸಿಕ್ಕಿದ ಮೇಲೆ ಎದುರಿನವರಿಗೆ ಉಪದೇಶ ಮಾಡೋದು ಬಹಳ ಸುಲಭ. ನಿನಗೇನು ಅಂಥ ಕಷ್ಟ ಬಂದಿರೋದು? ತೊಂಡೆ ಹಣ್ಣಿನ ಕೆಂಪು ಕೊಕ್ಕು! ಹಸುರಿನ ಬಣ್ಣ, ಸೊಗಸಿನ ಮೈಯಿ, ಮಾತೋ ಮಲ್ಲಿಗೆಯರಳಿನ ಮಳೆಯು.

ಗಿಳಿಯಣ್ಣ : ನನ್ನ ಆಕಾರ ಮೈ ಸೊಗಸನ್ನೇನೋ ಹೇಳಿ ಬಿಟ್ಟೆ. ಅದರಿಂದ ನಾನು ನಮ್ಮವರು ಎಷ್ಟು ಕಷ್ಟಪಡ್ತಿದ್ದೇವೋ ಗೊತ್ತಾ?

ಕಾಗೆಯಣ್ಣ : ಏನಪ್ಪ ನಿಮಗೆ ಅಂಥ ಕಷ್ಟ?

ಗಿಳಿಯಣ್ಣ : ನಮ್ಮ ಮೈಬಣ್ಣ ಹಸಿರು. ಹಸಿರು ಮರಗಳ ಮರೆಯಲ್ಲಿ ಮರೆಯಾಗಿಯೇನೋ ಕೂತ್ಕೋತೀವಿ. ಆದರೆ ನಮ್ಮ ಕೊಕ್ಕಿನ ಕೆಂಪು ಕೆಂಡದ ಹಾಗೆ ಹೊಳೆಯುತ್ತೆ. ನಮ್ಮ ಮಾತಿನ ಚೆಲುವಿಗೆ ಈ ಮನುಷ್ಯರು ಸುಮ್ಮನೆ ಇರದೆ ನಮ್ಮ ಕುತ್ತಿಗೆ ಹಿಡಿದು ಎಳಕೊಂಡು ಹೋಗಿ ಪಂಜರದ ಸೆರೆಯಲ್ಲಿ ಕೂಡಿ ಹಾಕ್ತಾರೆ. ನಮ್ಮ ಮಾಂಸಕ್ಕೆ ಆಸೆ ಪಟ್ಟು ಬೇಟೆಗಾರರು ಬೆನ್ನಲ್ಲೇ ಇರ್ತಾರೆ. ಸ್ವಾತಂತ್ರ್ಯ ಇಲ್ಲದೆ, ಸ್ವಚ್ಛಂದವಾಗಿ ಓಡಾಡೋಕೆ ಆಗದೆ ಕೊರಗಿ ಕೊರಗಿ ಸಾಯಬೇಕಾಗುತ್ತೆ.

ನವಿಲಣ್ಣ : ಗಿಳಿಯಣ್ಣ ನೀನು ನಿನ್ನ ಸಮಸ್ಯೆಯೇನೋ ಹೇಳಿದೆ, ನನ್ನ ಹಣೆ ಬರಹವೂ ಅಷ್ಟೇ! ಹಾಗೆ ನೋಡಿದರೆ ನಿನಗಿಂತಲೂ ಭಯಂಕರ. ನನ್ನ ಬೆಡಗಿನ ಹೆಜ್ಜೆಗೆ, ಘಲಿ ಘಲಿ ಗೆಜ್ಜೆಗೆ ಬಣ್ಣದ ಗರಿಗಳ ಮೋಹಕ ಸೆಳೆತಕ್ಕೆ ಬಿದ್ದು, ಎಲ್ಲಿ ನಾವು ಕಾಣಿಸಿದರೆ ಅಲ್ಲೇ ಕೊಲ್ಲೋಕೆ ಸಿದ್ಧವಾಗಿರ್ತಾರೆ. ನಿನ್ನ ಹಾಗೆ ಎಲ್ಲೆಂದರಲ್ಲಿ ಊರೂರಲ್ಲಿ ಬೀದಿ ಬೀದೀಲಿ ಓಡಾಡಿ ಹಳ್ಳಿಗಳ ಚೆಲುವು, ಪಟ್ಟಣಗಳ ಅದ್ದೂರಿ ನೋಡೋ ಅವಕಾಶ ನಮಗೆಲ್ಲಿದೆ. ಯಾರ ಕಣ್ಣಿಗೆ ಬಿದ್ದು ಸಾಯಬೇಕಾಗುತ್ತೋ ಅನ್ನೋ ಹೆದರಿಕೇಲೇ ಬದುಕ ಬೇಕಾಗುತ್ತೆ.

ಚಿಟ್ಟೆ : ನೀವು ಹೇಳಿದ್ದೆಲ್ಲ ಕೇಳಿಸಿಕೊಂಡೆ. ನನ್ನ ಹಣೆ ಬರಹಾನೂ ಚೆನ್ನಾಗಿಲ್ಲ ಬಿಡು. ಹೂವಿಂದ ಹೂವಿಗೆ ಹಾರುತ್ತ ಮಜವಾಗಿ ಮಧುಪಾನ ಮಾಡೋದಷ್ಟೆ ನಿಮ್ಮ

ಕಣ್ಣಿಗೆ ಬೀಳುತ್ತೆ. ನಮ್ಮ ಬಣ್ಣಗಳೇ ನಮಗೆ ಸಾವು ತಂದಿದೆ. ದೊಡ್ಡವರು ಚಿಕ್ಕವರು ನಮ್ಮ ಬೆನ್ನಟ್ಟಿ ಬಂದು ರೆಕ್ಕೆಗಳಿಂದ ಹಿಡಿದು ಹಿಂಸೆ ಮಾಡೋದನ್ನ ಅನುಭವಿಸಿದರೇನೇ ಗೊತ್ತಾಗೋದು.

**ಕೋಗಿಲೆ** : ಎಲೆ ಎಲೆ ಹಂಸವೆ
ನಿನಗೇನಿಲ್ಲವೆ
ಸಂಕಟವೊಂದನು
ಹೇಳಲು ನಮಗೆ?
ತಣ್ಣನೆ ಕೊಳದಲಿ
ಅಲೆಗಳ ಜೊತೆಯಲಿ
ಆಡುವ ಬೆಡಗಿನ
ಕತೆ ಹೇಳು

**ಹಂಸ** : ಕತೆಯೇನಿದೆ! ನಿಮ್ಮೆಲ್ಲರಿಗಿಂತ ಬೇರೆ!! ನನ್ನ ಬಿಳುಪು ಬೆಡಗುಗಳು
ಯಾರನ್ನು ತಾನೇ ಬಿಟ್ಟೀತು? ಹಿಡೀತಾರೆ, ರೆಕ್ಕೆ ಮುರೀತಾರೆ, ವಿಹಾರಕ್ಕೆಂದು ಬರುವ ಪ್ರಣಯಿಗಳು ನಮ್ಮನ್ನು ಹಿಡಿದು ಮುಷ್ಟೀಲಿ ಬಿಗಿದು ಖುಷಿ ಪಡೋದು ನೋಡಿದಾಗ ನನಗೆ ನುಂಗಿ ಹಾಕ ಬೇಕೆನಿಸುತ್ತೆ. ಅಲ್ದೆ ನೋಡಿ, ಯಾವಾಗಲೂ ನೀರಿನಲ್ಲೇ ಇದ್ದು ಇದ್ದೂ ವಾಕರಿಕೆ ಬರೋ ಹಾಗೆ ಆಗಿದೆ. ನಿಮ್ಮ ಹಾಗೆ ಎಲ್ಲೆಂದರಲ್ಲಿ ತಿರುಗಾಡೋ ಹಾಗೆ ಇಲ್ವಲ್ಲ.

**ಕಾಗಣ್ಣ** : ಏನಾದರೂ ಹೇಳಿ ಗೆಳೆಯರೇ ನನ್ನ ರೂಪ, ಬಣ್ಣ, ಬದುಕು ನಿಕೃಷ್ಟ. ನಾನು ಯಾರಿಗೆ ಬೇಕಾಗಿದ್ದೀನಿ. ನನ್ನ ಬಗ್ಗೆ ಜನ ಅಸಹ್ಯವಾಗಿ ಮಾತಾಡ್ತಾರೆ. ನಾನು ಮುಟ್ಟಿದರೆ ಜಾತಿ ಕೆಟ್ಟಂತೆ ಹೌಹಾರ್ತಾರೆ. ಎಲ್ಲಕ್ಕಿಂತ ಅಪಶಕುನದ ದರಿದ್ರ ಹಕ್ಕಿ ಅಂತ ಕರೆಸಿಕೊಳ್ಳೋದು

ನನಗೆ ಸಾಧ್ಯಾನೇ ಇಲ್ಲ. ಅದಕ್ಕಾಗಿ ನಿಮ್ಮಗಳಿಗಿರುವ
ಚೆಲುವು ಬಣ್ಣಗಳು ನನಗೆ ಬೇಕೇ ಬೇಕು.
ಹೇಳಿ ಗೆಳೆಯರೆ
ಹೃದಯ ಪ್ರಿಯರೆ
ದಾರಿಯಾವುದಿದೆ
ನನ್ನಾಸೆ ಫಲಿಸಲು
ನನಗೂ ಹಸುರಿನ ಅಂದವು
ಇರಲಿ
ಹೊಳಪು ಮಾಣಿಕ್ಯದ
ಗಿಳಿಯ ಕೊಕ್ಕಿರಲಿ
ಇಲ್ಲ ಇರಲಿ ಈ ನವಿಲಿನ
ಸೊಕ್ಕು
ಮೋಡದ ದನಿಗೆ
ಕುಣಿದಾಡುವ ಉಕ್ಕು
ಸಾವಿರ ಕಣ್ಣಿನ ಗರಿಗಳ
ಅಂದ
ಕಾಮನ ಬಿಲ್ಲಿನ ಬಣ್ಣವೆ
ಚಂದ
ನಳದಮಯಂತಿಯ
ಪ್ರಯಣದೌತ್ಯದ
ಪಾತ್ರಕ್ಕೆ ಬಂದ
ಮೆಚ್ಚು ಮೆರುಗುಗಳು
ನನಗೂ ಇರಲಿ
ಹಂಸ ನಡಿಗೆಯನು
ಹಾಡಿ ಹೊಗಳುವಾ
ಕವಿ ಕೋಗಿಲೆಗಳ

ಕೃಪೆಯಿರಲಿ
ಮಧುಮಾಸಕೆ
ದೇವಗಾನದೊಲು
ಹಾಡುವ ಕೋಗಿಲೆ
ಕೂಜನಕೊರಳದು
ನನಗಿರಲಿ ॥
ಎಂಥ ಬಣ್ಣಗಳೆ ಪಾತರಗಿತ್ತಿ
ಎದೆ ತುಡಿವುದು
ಅದ ಪಡೆಯಲು
ಬಯಕೆಯು ಸುತ್ತಿಸುತ್ತಿ
ನೀಲಿ ಹಸಿರು ಹಳದಿ ಕೆಂಪು
ಕಪ್ಪು, ಬಿಳುಪು ಬಣ್ಣಗಳೆಷ್ಟೋ!
ಬದುಕಿದರೂನೇ ಕ್ಷಣವೊಂದು
ಇರಲಿ ತೃಪ್ತಿಯು ನನಗೆಂದೂ॥

**ನವಿಲು** : ನಾವು ನಿನಗೆ ಎಷ್ಟು ಹೇಳಿದರೂ ನಿನಗೆ ನಿನ್ನ ಮನಸ್ಸಿಗೆ ಹತ್ತೊಲ್ಲ. ಸರಿ ಬಿಡು. ನಿನ್ನ ಚಿಂತೆಯಲಿ ನೀ ಬದುಕು. ಬೇಕೆನಿಸುವುದನ್ನು ನೀ ಹುಡುಕು.

**ಕಾಗಣ್ಣ** : ಸಿಟ್ಟು ಮಾಡಿಕೊಳ್ಳಬೇಡಿ ಗೆಳೆಯರೇ. ಅಸಹಾಯಕನಾಗಿ, ಆರ್ತನಾಗಿ ನಿಮ್ಮಲ್ಲಿ ನನ್ನ ನೋವನ್ನು ಹೇಳಿಕೊಂಡಿರೆ ನನ್ನ ಕೈಬಿಟ್ಟು ಹೋಗುವಿರಾ?

**ಕೋಗಿಲೆ** : ಹೇಳು ಕಾಗಣ್ಣ, ನಾವು ನಿನಗೆ ಏನು ಸಹಾಯ ಮಾಡಬೇಕೋ ಹೇಳು. ನಮ್ಮ ಕೈಲಾದ್ದನ್ನು ನಾವು ಮಾಡ್ತೀವಿ. ನಮಗೆ ದೇವರು ಶಕ್ತಿ ನೀಡಿದ್ದರೆ ನಾವೆಲ್ಲರೂ ನಮ್ಮ ನಮ್ಮ ಗುಣಗಳನ್ನು ನಿನಗೆ ಧಾರೆಯೆರೆದು ಕೊಡ್ತಿದ್ದಿವಿ.

ನವಿಲು : ಅಬ್ಬ ಸಧ್ಯ, ನಾನಂತು ಮೊದಲು ನನ್ನ ಗರಿಗಳನ್ನು ತೆಗೆದುಕೊಡ್ತಿದ್ದೆ.

ಹಂಸ : ನಾನೂ ಬೇಕಾದರೆ ನನ್ನ ಬಣ್ಣ, ನನ್ನ ನಡಿಗೆ ಕೊಟ್ಬಿಡ್ತಿದ್ದೆ.

ಪಾತರಗಿತ್ತಿ (ಚಿಟ್ಟೆ) : ನಾನು ನನ್ನ ರೆಕ್ಕೆ, ಅಲ್ಪಾಯುಷ್ಯನ್ನು ಕೊಡ್ತಿದ್ದೆ.

ಕಾಗಣ್ಣ : ಬೇಡ ಬೇಡ ನೀವ್ಯಾರೂ ಏನೂ ಕೊಡಬೇಡಿ. ನಿಮ್ಮಿಂದ ಕಿತ್ಕೊಳ್ಳೋಷ್ಟು ಸ್ವಾರ್ಥಿ ಅಲ್ಲ. ನೀವು ನನಗೆ ನನ್ನ ಈ ಜನ್ಮ ಹೋಗಿ ಬೇರೆ ಜನ್ಮ ಬರೋ ಹಾಗೆ ಮಾಡೋ ದಾರಿ ತೋರಿಸಿ.

ಕೋಗಿಲೆ : ಇಂಥದ್ದೆಲ್ಲ ಮಾಡೋಕೆ ತಪಸ್ಸು ಮಾಡಬೇಕು. ದೇವರನ್ನು ಮೆಚ್ಚಿಸಬೇಕು.

ನವಿಲು : ಅದಕ್ಕೂ ಮೊದಲು ವನರಾಣೀನ, ವನದೇವಿನ ನೋಡಿ ಮಾತಾಡಿ ಬಾ. ಅವಳೇ ನಿನಗೇನಾದರೂ ದಾರಿ ತೋರಿಸ್ತಾಳೆ.

ಕಾಗಣ್ಣ : ತುಂಬ ಉಪಕಾರವಾಯಿತು. ಗೆಳೆಯರೇ ವನದೇವಿಯನ್ನು ನೋಡಿ ಬರ್ತೇನೆ.

ನವಿಲು : ಒಳ್ಳೇದಾಗಲಿ ಗೆಳೆಯಾ ನಿನ್ನಾಸೆ ಪೂರೈಸಲಿ. ಬನ್ನಿ ಗೆಳೆಯರೇ ನಮ್ಮ ದಾರಿ ನಾವು ಹೋಗೋಣ.

**(ದೃಶ್ಯದ ಪ್ರಾರಂಭದಲ್ಲಿನ ಹಾಡನ್ನೇ ಹಾಡುತ್ತ ಕುಣಿಯುತ್ತಾ, ನಲಿಯುತ್ತ ಒಂದು ದಿಕ್ಕಿಗೆ ಹೋಗುತ್ತವೆ. ಕಾಗೆ ಮತ್ತೊಂದು ದಿಕ್ಕಿಗೆ ಹೋಗುತ್ತದೆ.)**

**(ಕಾಡಿನಲ್ಲಿ ಸುತ್ತಾಡುತ್ತಾ ಮರಗಿಡ ಬೆಟ್ಟ ನದಿ ಇರೋ ಕಡೇಲೆಲ್ಲ ಕಾಗೆ, ವನದೇವಿ, ವನದೇವಿ ಎಲ್ಲಿದ್ದೀಯ, ನಾನು, ಕಾಗಣ್ಣ ಕರೀತಿದ್ದೀನಿ. ನಿನ್ನನ್ನು ನೋಡ್ಬೇಕು, ವನದೇವಿ, ವನದೇವಿ ಬೇಗ ಬಾ' ಎಂದು ಹಲವು ರೀತಿಯಲ್ಲಿ ಕೂಗುತ್ತೆ)**

ವನದೇವಿ : **(ಸಾಲಂಕೃತಳಾಗಿ ತನ್ನ ಬಳಗದ ಜೊತೆಗೆ ಬರುತ್ತಾಳೆ. ವ್ಯಗ್ರವಾಗಿರುವ ಕಾಗೆಯನ್ನು ನೋಡಿ)**
(ಪ್ರೀತಿಯಿಂದ) ಕಾಗಣ್ಣ! ಕಾಗಣ್ಣ, ಇಲ್ನೋಡು ನಾನು ಬಂದಿದ್ದೀನಿ. ನೀ ಯಾಕೆ ಕರೆದೆ ನನ್ನನ್ನು?

ಕಾಗೆ : (ತಿರುಗಿ) ಓ ವನದೇವಿ! (ಸಂತೋಷ) ಬಂದೆಯಾ!

ವನದೇವಿ : ಬಂದಿದ್ದೀನಿ ಹೇಳು, ನಿನಗೆ ಏನು ಬೇಕಾಗಿದೆ?

ಕಾಗೆ : ನಾನೊಂದು ಪ್ರಶ್ನೆ ಕೇಳಲೇ?

ವನದೇವಿ : ಧಾರಾಳವಾಗಿ ಕೇಳು

ಕಾಗೆ : ನಾನುಯಾರು?

ವನದೇವಿ : ಯಾಕೆ ಸಂದೇಹ?

ಕಾಗೆ : ಹೌದು ಸಂದೇಹಾನೇ? ನಾನು ಯಾರು?

ವನದೇವಿ : ನನ್ನ ಮಕ್ಕಳಲ್ಲಿ ನೀನೂ ಒಬ್ಬ

ಕಾಗೆ : ಇಲ್ಲ ಸುಳ್ಳು. ನಾನು ನಿನ್ನ ಮಗು ಅಲ್ಲ. ನಿನ್ನ ಮಗು ಆದ್ರೆ, ನಿನ್ನ ಚೆಲುವು ನನಗೆ ಯಾಕಿಲ್ಲ. ನಿನ್ನ ಮಕ್ಕಳಾದ ಗಿಳಿ, ಹಂಸ, ಕೋಗಿಲೆ, ನವಿಲಿನ ಹಾಗೆ ನಾನ್ಯಾಕೆ ಚಂದ ಇಲ್ಲ?

ವನದೇವಿ : (ನಕ್ಕು) ಓ ಅದಾ ನಿನ್ನ ಪ್ರಶ್ನೆ?

ಕಾಗೆ : ನೀನೇನು ಅಷ್ಟು ಸಲೀಸಾಗಿ ಮಾತಾಡ್ತಿ?

ವನದೇವಿ : ಮಗು ನಿನ್ನ ಪ್ರಶ್ನೆ ಕೇಳಿನನಗೆ ನಗು ಬಂತು. ನೋಡು ಪ್ರಪಂಚದಲ್ಲಿ ಎಲ್ಲರೂ ಒಂದೇ ಥರಾ ಇದ್ದಾರಾ? ಈ ಕಾಡಿನಲ್ಲಿ ಎಲ್ಲವೂ ಒಂದೇ ಥರಾ ಇವೆಯೇ? ಹೂಗಳ ಬಣ್ಣ ಬೇರೆ, ಆಕಾರ ಬೇರೆ, ಆಕಾಶ ನೀಲಿಯಾಗಿರುತ್ತೆ, ಕಾಡು ಹಸಿರಾಗಿರುತ್ತೆ.

ಕಾಗೆ : ನನಗೆ ನಿನ್ನ ವರ್ಣನೆ ಬೇಡ. ನನಗೆ ಈ ರೂಪ ಬೇಡ, ಈ ಬಣ್ಣ ಬೇಡ, ಈ ರೆಕ್ಕೆ ಬೇಡ ಈ ಗರಿ ಬೇಡ.

ವನದೇವಿ : ಹಾಗಾದರೆ ನಿನಗೇನು ಬೇಕು?

ಕಾಗೆ : ನನ್ನ ರೂಪ ಬದಲಾಗಬೇಕು. ನಾನಿಷ್ಟಪಡೋ ರೂಪಾ ನನಗೆ ಸಿಗಬೇಕು.

ವನದೇವಿ : ಮಗು ನೀನು ಕೇಳಿದ್ದು ನನಗೆ ಕೊಡೋಕೆ ಸಾಧ್ಯ ಇಲ್ಲ.

ಕಾಗೆ : ಹಾಗಾದರೆ ನಾನು ಏನು ಮಾಡಬೇಕು, ಯಾರ ಹತ್ರ ಹೋಗ್ಬೇಕು?

ವನದೇವಿ : ನೋಡು ಇಲ್ಲಿಂದ ಸಾವಿರ ಮೈಲಿ ದೂರದಲ್ಲಿ ಒಂದು ಕೆಂಪು ಸಮುದ್ರವಿದೆ. ಅದು ದಾಟಿ ಹೋದರೆ ಒಂದು ದೊಡ್ಡ ಬೆಟ್ಟ ಇದೆ. ಆ ಬೆಟ್ಟದ ಮೇಲೆ ಒಬ್ಬ ಯೋಗಿ ಇರ್ತಾನೆ. ಭೂತನಾಥ ಅಂತ. ಆತನಿಗೆ ಅದ್ಭುತ ಮಂತ್ರಶಕ್ತಿ ಇದೆ. ನೀನು ಕೇಳಿದ ರೂಪ ಕೊಡ್ತಾನೆ.

ಕಾಗೆ : ತುಂಬಾ ಉಪಕಾರವಾಯಿತು ವನದೇವಿ. ಈಗಲೇ ಹೋಗ್ತೀನಿ.

ವನದೇವಿ : ಒಳ್ಳೇದಾಗಲಿ ಮಗು. ನಿನ್ನಾಸೆ ಕೈಗೂಡಲಿ.

ಕಾಗೆ : ಬರುತ್ತೇನೆ, ನಮಸ್ಕಾರ.

ಭಲೆ! ಭಲೆ! ನನಗೂ
ಭಾಗ್ಯವು ಬಂತು
ಸಿಗಲಿದೆ ರೂಪವು
ಅಂತೂ ಇಂತೂ ॥ಭ॥
ಸಾರುವೆ ಯೋಗಿಯ
ಬಳಿಯನು ಈಗಲೆ
ಕೆಂಪು ಸಮುದ್ರವ
ದಾಟುವೆ ಕೂಡಲೆ ॥ಭ॥
ವೇಗದಿ ಹಾರಿ
ಬೆಟ್ಟವನೇರಿ

ಯೋಗಿಯ ಕಾಣುವೆ
ಸಾಗುತ ದಾರಿ॥
ಕೊಟ್ಟರೆ ವರವನು
ಯೋಗಿಯು ನನಗೆ
ಬೇಡುವೆ ನನಗೆ
ಬೇಡುವೆ ನಾವುದ
ರೂಪವನು? ॥
ನವಿಲೆನ್ನಲೇ ಗಿಳಿಯೆನ್ನಲೇ
ಕೋಗಿಲೆ ಹಂಸ ಯಾವುದೆನ್ನಲಿ
ಇಲ್ಲವೆ ಎಲ್ಲವ ಬಿಟ್ಟು ಕೇಳಲೆ
ಪಕ ಪಕ ಬಣ್ಣದ ಪಾತರಗಿತ್ತಿ ॥

**(ಎಂದು ಮೈಮರೆತು ಹಾಡಿ ನಲಿಯುತ್ತಾ ಹಾರುತ್ತಾ ಹಾರುತ್ತಾ ದೂರ ದೂರ ಸಾಗುತ್ತದೆ. ಸಮುದ್ರ ಹಾರಿದಂತೆ, ಬೆಟ್ಟ ಏರಿದಂತೆ ಮಾಡುತ್ತದೆ.)**

**(ವನದೇವಿ ಹೇಳಿದ ಬೆಟ್ಟ ಕಾಣುತ್ತದೆ. ಝುಳು ಝುಳು ಹರಿವ ಹೊಳೆಗಳ ಸದ್ದು. ಗಾಳಿ ಬೀಸುವ ಸದ್ದು. ನೇರವಾಗಿ ಕಾಗೆ ಆ ಬೆಟ್ಟದ ಮೇಲೆ ಬಂದು ಇಳಿಯುತ್ತದೆ. ಸುತ್ತಲೂ ಕಣ್ಣಾಡಿಸುತ್ತದೆ. ದೂರದಲ್ಲಿ ಯೋಗಿಯೊಬ್ಬ ಕಾಣಿಸುತ್ತಾನೆ.)**

**ಕಾಗೆ** : (ಯೋಗಿಯನ್ನು ನೋಡಿ) ಯೋಗಿ ಮಹಾರಾಜ! ಯೋಗಿ ಮಹಾರಾಜ. ನಾನು ಕಾಗಣ್ಣ ಬಂದಿದ್ದೀನಿ. ದೂರದೂರದಿಂದ ಕೆಂಪು ಸಮುದ್ರ ದಾಟಿ ಬಂದಿದ್ದಿನಿ. ಅನುಗ್ರಹಿಸಬೇಕು.

**ಯೋಗಿ** : (ನಿಧಾನವಾಗಿ ಕಣ್ತೆರೆದು) ಯಾರದು? ನನ್ನ ಧ್ಯಾನ ಭಂಗ ಮಾಡುವವರು.

**ಕಾಗೆ** : (ನಡುಗುತ್ತಾ) ಅಪರಾಧವಾಯಿತು. ಕ್ಷಮಿಸಬೇಕು.

ಯೋಗಿ : ಯಾರು ನೀನು? ಯಾಕೆ ಬಂದೆ? ಇಲ್ಲಿಗೆ ಯಾರೂ ಬರಬಾರದು. ಈ ಕೂಡಲೇ ಹೊರಟು ಹೋಗು. ಇಲ್ಲಾಂದ್ರೆ ಶಾಪ ಕೊಟ್ಟು ಬಿಡ್ತೀನಿ.

ಕಾಗೆ : (ವಿನಮ್ರತೆಯಿಂದ) ಯೋಗಿ ಮಹಾರಾಜ ಸಿಟ್ಟಾಗಬೇಡಿ. ನಾನು ಬಹಳ ನೊಂದಿದ್ದೇನೆ. ನನಗೆ ನಿಮ್ಮ ಸಹಾಯಬೇಕು. ವನದೇವಿ ನಿಮ್ಮ ಹತ್ತಿರ ಹೋಗೂಂತ ಹೇಳಿದ್ಲು.

ಯೋಗಿ : (ಆಶ್ಚರ್ಯದಿಂದ) ಏನು ವನದೇವಿ ಕಳಿಸಿದ್ದಾಳೆಯೇ?.... ಸರಿ ಸರಿ ಈಗ ಹೇಳು, ಏನು ಬೇಕಾಗಿದೆ? ನಿನಗೆ ಬಂದಿರೋ ಕಷ್ಟವಾದ್ರೂ ಏನು?

ಕಾಗೆ : ಯೋಗಿ ಮಹಾರಾಜ, ನನ್ನ ದುಃಖ ಏನೂಂತ ಹೇಳಲಿ? ನನ್ನ ಗೆಳೆಯರೆಲ್ಲ ಎಷ್ಟು ಚಂದವಿದ್ದಾರೆ. ನಾನು ಮಾತ್ರ ಹೀಗೆ ಕಪ್ಪಾಗಿ ವಿಕಾರವಾಗಿದ್ದೀನಿ. ಎಲ್ಲರೂ ನನ್ನ ಕಂಡರೆ ಅಸಹ್ಯ ಪಟ್ಕೋತಾರೆ.

ಯೋಗಿ : ಅಯ್ಯೋ ಹುಚ್ಚಪ್ಪಾ! ಒಬ್ಬರ ರೂಪಕ್ಕೆ ಇನ್ನೊಬ್ಬರು ಅಸೂಯೆ ಪಡ್ತಾರೆಯೇ? ದೇವರು ಕೊಟ್ಟಿರೋ ಈ ರೂಪಾನ ಬೇಡಾಂತ ಹೇಳಬಾರ್ದು.

ಕಾಗೆ : ಇಲ್ಲ ಯೋಗಿಗಳೇ ನನಗೆ ಆಗ್ತಿರೋ ಅವಮಾನ, ಅವಹೇಳನ ನನಗೆ ಸಹಿಸೋಕೇ ಆಗ್ತಾ ಇಲ್ಲ. ದೇವರು ಕೊಟ್ಟ ರೂಪ ಆದ್ರೆ ಏನು? ಅದನ್ನು ಬದಲಾಯಿಸೋ ಶಕ್ತಿ ನಿಮ್ಮ ಹತ್ರ ಇದೇಂತ ವನದೇವಿ ಹೇಳಿದ್ದಾಳೆ.

ಯೋಗಿ : ಶಕ್ತಿ ಏನೋ ಇದೆ. ಆದರೆ ಒಂದೊಂದು ರೂಪದಲ್ಲೂ ಒಂದೊಂದು ಜನ್ಮದಲ್ಲೂ ಒಂದೊಂದು ಅಪಾಯ ಇದ್ದೇ ಇದೆ. ಅದಕ್ಕೇ ಸುಮ್ಮನೆ ಹೋಗಿ ಬದುಕಿರೊಷ್ಟು ಕಾಲ ಸುಖವಾಗಿರು.

ಕಾಗೆ : ಇಲ್ಲ ಯೋಗಿಗಳೇ ನೀವು ನನಗೆ ವರ ಕೊಡೋವರೆಗೂ ಇಲ್ಲಿಂದ ಹೋಗೋಲ್ಲ. ನೀವು ಕೊಡಲಿಲ್ಲಾಂದ್ರೆ ಇಲ್ಲೇ ಪ್ರಾಣ ಬಿಡ್ತೀನಿ.

ಯೋಗಿ : ಒಳ್ಳೇ ಪೇಚಾಟಕ್ಕೆ ಸಿಕ್ಕಿಸಿ ಬಿಟ್ಟೆಯಲ್ಲ ಕಾಗಣ್ಣ. ನಿನ್ನ ಹಟ ಬಹಳ ಜಾಸ್ತಿಯಾಯ್ತು... ಹೂ! ಸರಿ ಬಿಡು.... ನೀನಂತೂ ಇಲ್ಲಿಂದ ಹೋಗೋ ಹಾಗೇ ಕಾಣೋಲ್ಲ.

ಕಾಗೆ : ನನ್ನ ಉದ್ಧಟತನವನ್ನು ಕ್ಷಮಿಸಬೇಕು.

ಯೋಗಿ : ಸರಿ ಆಯ್ತು. ಹೇಳು ನಿನಗೆ ಯಾವ ರೂಪ ಬೇಕು?

ಕಾಗೆ : ನನಗೆ ನವಿಲಾಗಬೇಕು. ಎಂಥ ಬಣ್ಣ ಎಂಥ ಚೆಲುವು! ಅಬ್ಬಬ್ಬ ನೆನಸ್ಕೊಂಡ್ರೇ ರೋಮಾಂಚನವಾಗುತ್ತೆ.

ಯೋಗಿ : ಕೊಡ್ತೀನಿ. ಆದರೆ ಒಂದು ಮಾತು ನೀನು ಯಾವುದೇ ರೂಪ ಪಡೆದರೂ ನಿನಗೆ ಸುಖವಿರೋಲ್ಲ. ನಿನಗೇ ಗೊತ್ತಾಗುತ್ತೆ ನಿನ್ನ ಕಾಗೆ ಜನ್ಮಾನೇ ಎಷ್ಟೋ ವಾಸಿ ಅನ್ಸತ್ತೆ.

ಕಾಗೆ : ಯೋಗಿಗಳೇ ನಿಮ್ಮ ಅನುಗ್ರಹ ಇದ್ರೆ ನನಗೇನೂ ಆಗೋಲ್ಲ.

ಯೋಗಿ : ನೋಡು ಕಾಗಣ್ಣ, ಈ ಬೆಟ್ಟದ ಉತ್ತರ ಭಾಗದಲ್ಲಿ ಎರಡು ಹೊಂಡಗಳಿವೆ. ಹಾಲಿನ ಹೊಂಡ, ಕೆಂಡದ ಹೊಂಡ. ಮೊದಲು ಕೆಂಡದ ಹೊಂಡದಲ್ಲಿ ಬೀಳು, ನಂತರ ಹಾಲಿನ ಹೊಂಡದಲ್ಲಿ ಬಿದ್ದು 'ಜಗಜಗ ಗುಮ್ಮ, ನೀಡೋ ಬೊಮ್ಮ' ಅಂತ ಹೇಳಿ ಹಾಲಿನ ಹೊಂಡದಲ್ಲಿ ಮುಳುಗಿ ಯಾವ ರೂಪ ಬೇಕೋ ಸ್ಮರಿಸಿಕೋ ಆ ರೂಪ ನಿನಗೆ ಸಿಗುತ್ತೆ. ಎಷ್ಟು ರೂಪಗಳೋ ಎಷ್ಟು ಜನ್ಮಗಳೋ ಅನುಭವಿಸು. ಕಡೆಗೆ ನನ್ನ ಬಳಿ ಬಾ ನೀನು ಯಾವ ರೂಪವನ್ನು ಶಾಶ್ವತವಾಗಿ ಬಯಸ್ತೀಯೋ ಅದನ್ನೇ ನಿನಗೆ ಕೊಡ್ತೀನಿ. ಪ್ರತಿ ಸಲ ಇಲ್ಲಿಗೆ ಬರಬೇಡ. ನಿನಗೆ ನಾನೊಂದು ಮಂತ್ರ ಹೇಳಿಕೊಡ್ತೀನಿ. ಅದನ್ನು

ಹೇಳಿಕೋ ನಿನ್ನ ಪೂರ್ವ ರೂಪ ನಿನಗೆ ಬರುತ್ತೆ.

ಕಾಗೆ : ಧನ್ಯವಾದ ಯೋಗಿವರ್ಯ, ಬರುತ್ತೇನೆ.

ಯೋಗಿ : ಸುಖಿಯಾಗು! ಹೋಗಿಬಾ!

**(ಕಾಗೆ ನಮಸ್ಕರಿಸಿ ಹಾರುತ್ತಾ ಬರುತ್ತದೆ.)**

ಹಿನ್ನೆಲೆ : ನವಿಲಾಯಿತು ಕಾಗೆ
ನಲಿದಾಡಿತು
ಕುಣಿದಾಡಿತು
ಗರಿಗಳ ಬಿಡಿಸಿ
ಪಿಂಛವ ಕುಣಿಸಿ
ಮುಗಿಲಬ್ಬರ ದನಿಗೆ
ತನ್ನ ರೂಪದ ಸವಿಗೆ
ಮೈ ಮರೆಯಿತು
ಕೆನೆದಾಡಿತು
ತನಗಿಲ್ಲವು ಸರಿಸಾಟಿ
ಎಂದೆನ್ನುತ ಗಡಿದಾಟಿ
ನಲಿದಾಡಿತು ನವಿಲು ॥
ಎಲ್ಲಿಂದಲೋ ಬಂದಿ
ರಿಯಿತು ವೇಗದಿ ಶರವು
ಚೀರುತ್ತಲೇ
ನವಿಲೋಡಿತು
ನಲಿವೆಲ್ಲವ ಮರೆತು ॥

ಕಾಗೆ ನವಿಲು : ಅಯ್ಯೋ ಅಯ್ಯೋ ನೋವು ನೋವು, ನವಿಲಾಗಿ ನಾಲ್ಕು ದಿನ ಆಗಲಿಲ್ಲ, ಈಗಲೇ ಹೀಗಾಗಬೇಕೇ?

**(ದೂರದಲ್ಲಿ ಸದ್ದುಗಳು ಕೇಳಿಸುತ್ತವೆ. ಹಿಡೀರಿ! ಹಿಡೀರಿ! ಇಲ್ಲೆ ಎಲ್ಲೋ ಇರುತ್ತೆ)**

ದನಿ 1 : ನನಗೆ ಬೇಕು ಅದರ ಬಣ್ಣದ ಗರಿಗಳು

ದನಿ 2 : ನನಗೆ ಬೇಕು ಅದರ ಪಿಂಛ

ದನಿ 3 : ಅವೆಲ್ಲ ನೀವೇ ತಗೊಳ್ಳಿ, ನನಗೆ ಅದರ ಮಾಂಸ ಬೇಕು.

ಕಾಗೆ ನವಿಲು : ಪಾಪಿಗಳು ಇಲ್ಲಿಗೂ ಬರೋ ಹಾಗಿದೆ.... ಬೇಡಪ್ಪಾ ಬೇಡ. ಇಷ್ಟೊಂದು ಬಣ್ಣ ಇಷ್ಟೊಂದು ವಯ್ಯಾರ ಇದ್ರೆ ಯಾರು ತಾನೇ ಬಿಡ್ತಾರೆ? ನನಗೆ ಇದು ಬೇಡವೇ ಬೇಡ. ಗಿಳೀನೇ ಎಷ್ಟೊಂದು ಚಂದ. ಮರಗಳ ಮೇಲೆ ಇರೋದ್ರಿಂದ ಯಾರ ಕೈಗೂ ಸಿಗೊಲ್ಲ. ಈಗಲೇ ಹೋಗಿ ಹೊಂಡ ಮುಳುಗಿ ಬರ್ತೀನಿ.

**(ಕಾಗೆ ಹೋಗುತ್ತದೆ)**

**(ಗಿಳಿಯಾಗಿ ಬರುತ್ತದೆ)**

**ಒಂದಷ್ಟು ಹುಡುಗ ಹುಡುಗಿಯರು ಅಲೆದಾಡುತ್ತಾ ಬರುವರು. ಕಾಡಿನ ಸೌಂದರ್ಯವನ್ನು ನೋಡುತ್ತಾ ಮರದ ಮೇಲಿಂದ ಗಿಳಿಯನ್ನು ಗಮನಿಸುತ್ತಾರೆ.**

ಒಬ್ಬ ಹುಡುಗಿ : ಪಂಚವರ್ಣದ ಗಿಳೀ ನೋಡೆ. ಅಬ್ಬ! ಎಷ್ಟು ಚೆನ್ನಾಗಿದೆ.

2ನೇ ಹುಡುಗಿ : ಅದನ್ನು ಹೇಗಾದರೂ ಹಿಡೀಲೇ ಬೇಕು. ನನಗೆ ಗಿಳಿ ಅಂದ್ರೆ ಪ್ರಾಣ.

3ನೇ ಹುಡುಗಿ : ನನಗೂ ಅಷ್ಟೇ. ಆ ಗಿಳೀನ ಹಿಡ್ಕೊಂಡು ಪಂಜರದಲ್ಲಿಟ್ಟು ಸಾಕೋಣ.

1ನೇ ಹುಡುಗಿ : ನೀವು ಮಾತಾಡ್ತಾ ಇರಿ ಅದು ಪುರ್ರ್ ಅಂತ ಹಾರಿ ಹೋಗುತ್ತೆ.

2ನೇ ಹುಡುಗಿ : ಏ ಆ ಶಾಮೂಗೆ ಹೇಳೆ. ಅವನಿಗೆ ಮರ ಹತ್ತೋಕೆ ಬರುತ್ತೆ. ಮೆಲ್ಲಗೆ ಮರ ಹತ್ತಿ ಗಿಳೀನ ಹಿಡಿದು ಕೊಡ್ತಾನೆ.

3ನೇ ಹುಡುಗಿ : ಶಾಮೂ ಪ್ಲೀಸ್ ಆ ಗಿಳೀನ ಹಿಡ್ಕೋಡೋ. ಎಷ್ಟು ಚೆನ್ನಾಗಿದೆ ಅಲ್ವ? ನಾವೆಲ್ಲ ಅದರ ಜೊತೆ ಮಾತಾಡಬಹುದು.

**ಶಾಮು** : ಸರಿ ನಾನು ಗಿಳೀನ ಹಿಡಕೊಡ್ತೀನಿ ನನಗೆ ನೀವೇನು ಕೊಡ್ತೀರ? ಎಲ್ಲರೂ ಒಂದೊಂದು ಐಸ್‌ಕ್ರೀಂ ಕೊಡ್ತೀರಾ?

**ಎಲ್ಲರೂ** : ಹೂಂ ಆಯ್ತು ಕಣಪ್ಪ. ಮೊದಲು ಹಿಡಿಹೋಗು. **(ಹುಡುಗ ಮೆಲ್ಲನೆ ಮರದ ಬಳಿ ಹೋಗಿ ಗಿಳಿಯನ್ನು ಹಿಡಿಯುತ್ತಾನೆ.)**

**ಗಿಳಿ** : ಅಯ್ಯೋ ಸತ್ತೆ! ಸತ್ತೇ ಬೇಡೋ ಹುಡುಗ, ನನ್ನನ್ನು ಬಿಟ್ಟು ಬಿಡು, ನಾನು ಗಿಳಿಯಲ್ಲ ಕಾಗೆ! ಕಾಗೆ.

**ಶಾಮು** : ಏನು ನೀನು ಕಾಗೇನ, ನನಗೇ ಮೋಸ ಮಾಡ್ತೀಯ? ನನಗೆ ಕಾಣಿಸೋದಿಲ್ಲ ಅಂತ ತಿಳಿದಿದೆಯೇನು?

**ಗಿಳಿ** : ಇಲ್ಲ ಹುಡುಗ, ನಿಜವಾಗಿಯೂ ನಾನು ಕಾಗೆ. ನೀನೇ ನೋಡು **(ಎಂದು ಮಂತ್ರ ಜಪಿಸುತ್ತೆ. ಕಾಗೆ ರೂಪ ಬರುತ್ತೆ)**

**ಹುಡುಗಿಯರು**: ಏನಾಶ್ಚರ್ಯ! ನಿಜವಾಗಿ ಕಾಗೆ ಆಯ್ತಲ್ಲ. ಅಯ್ಯೋ ಶಾಮು ಬೇಗ ಇಳಿದು ಬಾರೋ, ಇದೇನಾದ್ರೂ ಮಂತ್ರವಾದಿ ಆಗಿದ್ದರೂ ಆಗಿರಬಹುದು. ನಮಗೂ ಏನಾದರೂ ಮಾಡಿಬಿಟ್ಟಾನು.

**ಶಾಮು** : ನಡೀರೇ! ಓಡಿರಿ! ನಾನೂ ಬಂದು ಬಿಟ್ಟೆ (ಎಂದು ಸರಸರನೆ ಇಳಿದು ಹುಡುಗಿಯರನ್ನೂ ಎಳೆದುಕೊಂಡು ಓಡುವನು.)

**ಕಾಗೆ** : ಸದ್ಯ ಹೊರಟು ಹೋದರು. ಹೂಂ ಅಂತೂ ನವಿಲಿಗೂ ಸುಖವಿಲ್ಲ, ಗಿಳಿಗೂ ಸುಖವಿಲ್ಲ... ಹಂಸವೇ ವಾಸಿ. ನೀರಿನ ಹತ್ತಿರ ಯಾರೂ ಬರೋದೇ ಇಲ್ಲ. ಹಾಯಾಗಿ ತನ್ನ ಪಾಡಿಗೆ ತಾನಿರುತ್ತೆ. ಅದೇ ಸರಿ. ಹಂಸವಾಗಿಯೇ ಬರ್ತೀನಿ.

**ಹಿನ್ನಲೆಯಿಂದ**: ಹಂಸವಾಯಿತು ಕಾಗೆಯು
ಕೊಳದ ತಡಿಯಲಿ

ಅಲೆಯ ಮಡಿಲಲಿ
ತೇಲಿ ನಲಿಯಿತು
ಸುಖವ ಸವಿಯಿತು ॥

**(ರಾಜಕುಮಾರಿಯೊಬ್ಬಳು ತನ್ನ ಸಖಿಯರಿಬ್ಬರ ಕೂಡಿ ಬರುತ್ತಾಳೆ)**

**ರಾಜಕುಮಾರಿ** : ಸಖಿಯರೇ ಈ ಉದ್ಯಾನವನ ಎಷ್ಟು ಮನೋಹರವಾಗಿದೆಯಲ್ಲ.

**ಸಖಿ 1** : ಬರೀ ಉದ್ಯಾನವನ ಅಷ್ಟೇ ಅಲ್ಲ ರಾಜಕುಮಾರಿ ಅಲ್ಲಿ ನೋಡಿ ಆ ಸುಂದರವಾದ ನಿರ್ಮಲ ಜಲದ ಆ ಕೊಳದಲ್ಲಿ ಅಚ್ಚಮಲ್ಲಿಗೆ ಬಿಳುಪಿನ ಹಂಸವನ್ನು ನೋಡಿದಿರಾ?

**ಸಖಿ 2** : ಅದರ ಒನಪೇನು, ಒಯ್ಯಾರವೇನು, ಬೆಡಗೇನು?

**ರಾಜಕುಮಾರಿ** : ಆಹಾ! ಹೌದೇ ಸಖಿ. ಇಂಥ ಹಂಸವನ್ನು ನಾನು ನೋಡಿಯೇ ಇರಲಿಲ್ಲ. ಇರಲಿ ಇದನ್ನು ಹಿಡಿದು ಮಾತನಾಡಿಸುವೆ. ನಳದಮಯಂತಿಯರನ್ನು ಸೇರಿಸಿದ್ದು ಇದೇ ಹಂಸ ಹೌದಲ್ಲ?!

**ಸಖಿ 1** : ಹಾಗಾದ್ರೆ ನೀವೂ ಕೂಡ ನಿಮ್ಮ ಪ್ರೇಮವೀರನಿಗೆ ಸಂದೇಶ ಕಳಿಸುತ್ತೀರೇನು?

**ರಾಜಕುಮಾರಿ** : (ಸಿಟ್ಟಿನಿಂದ) ಸಾಕು ಸುಮ್ಮನಿರೆ ಬಾಯ್ಬಡಕಿ.

**ಸಖಿ 2** : ರಾಜಕುಮಾರಿ ಅವಳು ಹೇಳಿದ್ದರಲ್ಲಿ ತಪ್ಪೇನು? ನೀವೂ ಈ ಹಂಸವನ್ನು ಹಿಡಿದು ಸಂದೇಶ ಕಳಿಸಿ.

**ಸಖಿ 1** : ನಾನೇ ಹಿಡಿದು ಕೊಡುತ್ತೀನಿ ಬಿಡಿ ರಾಜಕುಮಾರಿ. **(ಎಂದು ಮೆಲ್ಲನೆ ಹಿಂದಿನಿಂದ ಹೋಗಿ ಗಕ್ಕನೆ ಹಿಡಿದು ಬಿಡುತ್ತಾಳೆ)**

**ಕಾಗೆ ಹಂಸ** : ದಮ್ಮಯ್ಯ ನನ್ನನ್ನು ಹಿಂಸಿಸಬೇಡಿ. ನಾನು ಉಸಿರು ಕಟ್ಟಿ ಸಾಯ್ತಿದ್ದೀನಿ. ನನ್ನನ್ನು ಬಿಟ್ಟು ಬಿಡಿ! ಬಿಟ್ಟುಬಿಡಿ.

ಸಖಿ : (ಅಣಕಿಸುತ್ತಾ) ಆಹಾಹಾ! ಬಿಟ್ಟು ಬಿಡೋಕೆ ನಾವೇನು ಬುದ್ಧಿ ಇಲ್ದೋರಲ್ಲ. ಕಷ್ಟಪಟ್ಟು ಹಿಡಿದದ್ದು ಬಿಟ್ಟು ಬಿಡೋಕೆ ಅಲ್ಲ. ನೀನೂ ನಮ್ಮ ರಾಜಕುಮಾರಿಯ ಸೆರೆಯಲ್ಲಿ ಬಿದ್ದಿರಬೇಕು. ತಿಳೀತಾ?

ಕಾಗೆ ಹಂಸ : ಅಯ್ಯೋ ನಾನು ಹಂಸ ಅಲ್ಲ. ಕಾಗೆ ಕಾಗೆ!

ಸಖಿ : ಏಯ್ ಬಾಯಿ ಮುಚ್ಚು. ಕಾಗೆಗೂ ಹಂಸಕ್ಕೂ ವ್ಯತ್ಯಾಸ ತಿಳೀದಿರೋ ಮುಠ್ಠಾಳರು ಅಂದ್ಕೊಂಡ್ಯೇನು?

ಕಾಗೆ ಹಂಸ : ಇಲ್ಲ ನಿಜವಾಗಿಯೂ ನಾನು ಕಾಗೆ. ನೀವೇ ನೋಡಿ (ಅಂದು ಮಂತ್ರ ಪಠಿಸಿ ಕಾಗೆಯಾಗುತ್ತದೆ).

ರಾಜಕುಮಾರಿ : (ಬೆರಗಾಗಿ) ಅರೆರೆ ಇದೇನು ವಿಚಿತ್ರ! ನಾವೇನಾದರೂ ಮಾಯಾಲೋಕಕ್ಕೆ ಬಂದಿದ್ದೇವೆಯೇ ಹೇಗೆ?

ಸಖಿಯರು : (ಕಾಗೆಯಾದ ಹಂಸವನ್ನು ಒಗೆಯುತ್ತ) ಛಿ! ಛೀ ಅನಿಷ್ಟ ಮುಂಡೇದು ಇದು ಯಾಕೆ ಇಲ್ಲಿಗೆ ಬಂತು. (ಎಂದು ಹಚ ಹಚ ಎನ್ನುತ್ತ ಓಡಿಸುವರು.)

ರಾಜಕುಮಾರಿ : ಸಖಿಯರೇ ಇದೇನಿದು. ನನಗೆ ನಂಬೋಕೇ ಆಗ್ತಿಲ್ಲ, ಅದೇನಾದ್ರೂ ಮಂತ್ರದ ಕೊಳವಾಗಿದ್ರೆ?.... ಅಯ್ಯೋ ಭಯವಾಗಿತ್ತೆ. ಬನ್ನಿ ಬನ್ನಿ, ಸಾಕು. ಇನ್ನು ವಿಹಾರವೂ ಬೇಡ. ವಿಲಾಸವೂ ಬೇಡ.

**(ಎಂದು ಹೋಗಲು ತೊಡಗುತ್ತಾಳೆ. ಕಾಗೆ ಓಡಿ ಹೋದ ದಿಕ್ಕನ್ನೇ ತಿರುತಿರುಗಿ ನೋಡುತ್ತಾ ಹೋಗುತ್ತಾರೆ.)**

ಹಿನ್ನೆಲೆ ಹಾಡು : ಯೋಗಿ ನೀಡಿದ
ವರವ ಪಡೆದು
ಸಗ್ಗ ಸುಖದಲಿ
ಕಾಗೆ ನಲಿಯಿತು.
ನವಿಲು ನಾಟ್ಯದ
ಗರ್ವ ಕೆದರಿತು

ಹೆಜ್ಜೆ ಕುಣಿತಕೆ
ನೆಲವು ಬೆದರಿತು
ಪಂಚವರ್ಣದ ಗಿಳಿಯ
ಬೆಡಗು ಹಂಸನಡಿಗೆಯ
ಮುದದ ಮೆರುಗು
ಕಾಗೆಗಾಯಿತು ಬೆರಗು ಬೆರಗು॥
ನೂರು ಬಣ್ಣದ/ಚಿಟ್ಟೆಯಾಯಿತು
ಕಲ ಕಂಠದಾ ಸಿರಿ
ಕೋಗಿಲೆಯು/ತಾನಾಯಿತು

ಹೀಗೆ ಸಾಗಿತು ಕಾಗೆಯ ಪಯಣ ಒಂದೊಂದಾಗಿ ಒಂದೊಂದಾಗಿ ದಾಟಿ ದಾಟಿ ದಣಿದು ಹೋಯ್ತು. ಎಲ್ಲೂ ಸುಖ ಕಾಣಲಿಲ್ಲ. ಮತ್ತೆ ಯೋಗಿ ಬಳಿಗೇ ಹೋಯಿತು.

**(ಯೋಗಿ ಮೊದಲಿನ ಹಾಗೆ ದ್ಯಾನಸ್ಥನಾಗಿದ್ದಾನೆ. ಕಾಗೆ ನಿಧಾನವಾಗಿ ಯೋಗಿಯನ್ನು ಸಮೀಪಿಸುತ್ತಿದೆ)**

**ಕಾಗೆ** : ಯೋಗಿರಾಜ! ಯೋಗಿರಾಜ, ಮತ್ತೆ ಬಂದಿದ್ದೇನೆ. ದಯವಿಟ್ಟು ನನ್ನಪರಾಧ ಮನ್ನಿಸಿ.

**ಯೋಗಿ** : ಓಹೋ ಮತ್ತೆ ಬಂದೆಯಾ.... ಇದೇನಿದು ಇನ್ನೂ ಕಾಗೆಯಾಗಿಯೇ ಇದ್ದೀಯ? ಯಾವ ರೂಪವೂ ಬೇಡವಾಯ್ತಾ ಹೇಗೆ?

**ಕಾಗೆ** : ಎಲ್ಲ ರೂಪಗಳೂ ರೂಪಾಂತರಗಳೂ ಮುಗಿದವು. ನೀವು ಹೇಳಿದ್ದು ನಿಜ, ಅಪಾಯ ಎಲ್ಲ ಜನ್ಮಗಳಲ್ಲೂ ಇದೆ. ನವಿಲು, ಗಿಳಿ, ಹಂಸ, ಚಿಟ್ಟೆ, ಕೋಗಿಲೆ – ಇದೆಲ್ಲವುಗಳಿಗಿಂತ ನನ್ನ ಜನ್ಮಾನೇ ಸುರಕ್ಷಿತ. ಯಾರಿಗೂ ನಾನು ಬೇಡ. ನನ್ನ ಪಾಡಿಗೆ ನಾನು ಹಾಯಾಗಿ ಇರಬಹುದು. ಯಾರೂ ನನ್ನ ತಂಟೆಗೆ ಬರೋದಿಲ್ಲ.

ಯೋಗಿ : (ಸಂತೋಷದಿಂದ) ಕಾಗಣ್ಣ ನಿನ್ನ ಮಾತು ಕೇಳಿ ನನಗೆ ತುಂಬಾ ಸಂತೊಷ ಆಗ್ತಿದೆ. ಹೊರಗಿನ ರೂಪಕ್ಕಿಂತ ಒಳಗಿನ ಮನಸ್ಸು ಸುಂದರವಾಗಿರಬೇಕು. ಇನ್ನು ಮೇಲಾದರೂ ನಿನ್ನ ಜನ್ಮಕ್ಕೆ ನೀನು ಸಂತೋಷ ಪಡೋದನ್ನ ಕಲಿ.

ಕಾಗೆ : ಹಾಗೆಯೇ ಆಗಲಿ. ನನಗೆ ಈ ಕಾಗೆ ಜನ್ಮವೇ ಶಾಶ್ವತವಾಗಿರಲಿ.

ಇನ್ನು ನಾನು ಅಳಲಾರೆ
ಏನೇ ಅನ್ನಲಿ ಹೇಗೆ ಕರೆಯಲಿ
ಮರೆಯುವೆ ಮನುಜರ
ಮೌಢ್ಯವನು,
ಜಾತಿ ದೂರನೆಂದೆನಲಿ
ಈಗಲೇ ಹೊಲೆಯ ಸೇರಿತೆನ್ನಿ
ಕೀಳು ಕೀಳು ಎನ್ನುತ
ದೂರಲು
ಅಳದೆ ನೋವನು
ನುಂಗುವೆನು
ಅಲ್ಪತೆಗೆ ಅಳುಕದೆ
ಕರಿ ಬಣ್ಣ ರೂಪಕ್ಕೆ
ಲಜ್ಜೆಪಟ್ಕೋಡದೆ
ನಾಳೆ ಬರುವುದು
ನಮಗೆ ಸೊಗದ
ದಿನಗಳನೆಂದು
ಹಾದಿ ಕಾಯುತ ಹೆಮ್ಮೆ
ಬಾಳ ಬಾಳುವೆನು
ಆರದೂ ಹಂಗಿಲ್ಲ

ಯಾರನೂ ಲೆಕ್ಕಿಸೆನು
ನನ್ನ ಬಾಳಿದು ನನದು
ಸ್ವಚ್ಛಂದ ಚಂದವು ॥

ಯೋಗಿ : ಹೋಗಿ ಬಾ ಕಾಗಣ್ಣ ನೀನು ತಿಳಿದ ಸತ್ಯವನ್ನು ನಿನ್ನ ಗೆಳೆಯರೆಲ್ಲರಿಗೂ ತಿಳಿಸು.

ಕಾಗೆ : ಆಯ್ತು ಗುರುವೆ ಇವತ್ತಿನಿಂದ ನನ್ನ ದುಃಖ ಗೋಳಾಟಗಳು ಮುಗಿದವು. ನಾನೇ ಸುಖಿ, ನಾನೇ ಸುಖಿ, ಬರುತ್ತೇನೆ.

**(ಕಾಗೆ ಯೋಗಿಗೆ ನಮಸ್ಕರಿಸಿ ಬರುತ್ತದೆ)**

* * *

**(ಮೊದಲಿನಂತೆ ಎಲ್ಲ ಪಕ್ಷಿಗಳು ಒಟ್ಟಿಗೆ ಬರುತ್ತವೆ. ಇನ್ನೊಂದು ಬದಿಯಿಂದ ಕಾಗೆ ಬರುತ್ತದೆ)**

ಕಾಗೆ : ಏನು ಚೆಲುವಿದು
ಎದೆಯ ತುಂಬಿದೆ ನಲಿವಿದು
ನಗೆಯನುಕ್ಕಿಸಿ/ ಮುದವ
ಹೊಮ್ಮಿಸಿ ಬನದ/ರಾಣಿಯು
ಬರುವಳು
ಕನಸು ನೂರನು
ತರುವಳು

ಎಲ್ಲ ಪಕ್ಷಿಗಳು : (ಆಶ್ಚರ್ಯದಿಂದ) ಅರೆ ಇದೇನಿದು ಆಶ್ಚರ್ಯ! ಕಾಗಣ್ಣ ಇಷ್ಟೊಂದು ಸಂತೋಷವಾಗಿ ಹಾಡ್ತಿದ್ದಾನೆ! (ಕಾಗೆಗೆ) ಕಾಗಣ್ಣ! ಕಾಗಣ್ಣ!... ಏನಪ್ಪ ಸಂತೋಷದ ಸುದ್ದಿ! ಇಷ್ಟೊಂದು ಗೆಲುವಾಗಿದ್ದಿ?

ಕಾಗೆ : ಹೌದು ಗೆಳೆಯರೇ. ನನಗೆ ಜ್ಞಾನೋದಯ ಆಗಿದೆ. ನನಗೆ ನಾನೇ ಆಗಿದ್ದರೇನೇ ಸುಖವಾಗಿರುತ್ತೇಂತ ತಿಳ್ಕೊಂಡೆ. ನಿಮ್ಮ ಬಗ್ಗೆ ಹೊಟ್ಟೆ ಕಿಚ್ಚು ಪಟ್ಟೆ. ಕ್ಷಮಿಸಿ

ಇನ್ನು ಮೇಲೆ ನಾನೂ ನಿಮ್ಮಲ್ಲಿ ಒಬ್ಬನಾಗಿರ್ತೀನಿ, ನಿಮ್ಮ ಸಂತೋಷದಲ್ಲಿ ನಾನೂ ಸಂತೋಷಪಡ್ತೀನಿ.

**ಪಕ್ಷಿಗಳು** : ಗೆಳೆಯಾ ನಿನ್ನನ್ನು ನೋಡಿ ನಮಗೆಲ್ಲ ಒಂಥರ ಸಮಾಧಾನ ವಾಯಿತು. ಹೋಗಲಿ ಬಿಡು ಈಗಲಾದರೂ ನಿನ್ನ ದುಃಖ ದೂರ ಆಯ್ತಲ್ಲ.

**ನವಿಲು** : ನಾನು ನಿನಗೆ ಮೊದಲೇ ಹೇಳ್ದೆ, ಸೃಷ್ಟೀಲಿ ವೈವಿಧ್ಯ ಇದ್ದರೇನೇ ಚೆನ್ನ. ನಾವೆಲ್ಲರೂ ಒಂದೇ ಥರಾ ಇದ್ದರೆ ಏನು ಚೆನ್ನ.

**ಕಾಗೆ** : ನೀನು ಹೇಳಿದ್ದೆಲ್ಲ ಸತ್ಯ ಅಂತ ನಾನೇ ಖುದ್ದಾಗಿ ಅನುಭವಿಸಿ ತಿಳ್ಕೊಂಡೆ. ಯೋಗಿಯೊಬ್ಬರು ನನಗೆ ಎಲ್ಲ ಜನ್ಮಗಳ ಅನುಭವ ಪಡೆಯೋ ವರ ಕೊಟ್ಟಿದ್ರು.

**ಪಕ್ಷಿಗಳು** : ಅಂದ್ರೆ? (ಬೆರಗು)

**ಕಾಗೆ** : ನವಿಲಾದೆ, ಹಂಸ ಆದೆ, ಗಿಳಿ ಆದೆ ಚಿಟ್ಟೆ ಆದೆ, ಕೋಗಿಲೆ ಆದೆ... ಎಲ್ಲರ ಕಷ್ಟ ಏನೂಂತ ಅನುಭವಕ್ಕೆ ಬಂತು. ಕಡೆಗೆ ನನ್ನ ಕಾಗೆ ಜನ್ಮಾನೇ ನನಗಿರಿಲೀಂತ ಬೇಡಿದೆ.

**ನವಿಲು** : ಒಳ್ಳೆದಾಯ್ತು. ಬಾ ನಾವೆಲ್ಲ ಸೇರಿ ವನದೇವಿಯ ಪೂಜೆ ಮಾಡೋಣ.

**ಕಾಗೆ** : ಹೌದೌದು. ನಡೀರಿ ವನದೇವಿಗೆ ನಾನೂ ನನ್ನ ಕತೆ ಹೇಳ ಬೇಕಿದೆ.

**ಹಿನ್ನೆಲೆ** : ಸಾಗಿದವೆಲ್ಲವು ಪಕ್ಷಿಗಳು
ವನದೇವಿಯ ಒಲವಿನ
ಬಂಧುಗಳು ಪ್ರೀತಿಯ
ಮಡಿಲಿನ ನೆರಳಲಿ ಬದುಕುವ
ಸೃಷ್ಟಿಯ ಚೆಲುವಿನ ಹಕ್ಕಿಗಳು

* * *



ಈ ಕೃತಿಯನ್ನು ರಚಿಸಿದ ಡಾ. ವಿಜಯಾ ಸುಬ್ಬರಾಜ್ ಎಂ.ಇ.ಎಸ್. ಕಾಲೇಜಿನ ನಿವೃತ್ತ ಪ್ರಾಧ್ಯಾಪಕರಾಗಿರುವುದೇ ಅಲ್ಲದೆ ನಾಡಿನ ಖ್ಯಾತ ಲೇಖಕಿಯೂ ಆಗಿದ್ದಾರೆ. ಸಾಹಿತ್ಯ ಶಿಕ್ಷಣದಲ್ಲಿ ಅವರದೇ ಆದ ರೀತಿಯಲ್ಲಿ ಛಾಪು ಮೂಡಿಸಿದ್ದಾರೆ. ಮೂವತ್ನಾಲ್ಕು ವರ್ಷಕ್ಕೂ ಮೇಲ್ಪಟ್ಟು ಶಿಕ್ಷಣ ಕ್ಷೇತ್ರದಲ್ಲಿ ಸೇವೆ ಸಲ್ಲಿಸಿದ ಇವರಿಗೆ 2002ರಲ್ಲಿ ಕರ್ನಾಟಕ ಸರಕಾರ ಕಾಲೇಜು ಶಿಕ್ಷಣ ಇಲಾಖೆ ವತಿಯಿಂದ 'ಆದರ್ಶ ಶಿಕ್ಷಕ' ಪ್ರಶಸ್ತಿ ಲಭಿಸಿದೆ.

ಕೇವಲ ಅಧ್ಯಾಪಕ ವೃತ್ತಿಗಷ್ಟೇ ಸೀಮಿತವಾಗದೆ ಕಾವ್ಯ, ನಾಟಕ, ವಿಮರ್ಶೆ, ಕತೆ, ಕಾದಂಬರಿ ಇತ್ಯಾದಿ ಹಲವಾರು ಸಾಹಿತ್ಯ ಪ್ರಕಾರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು, ತಮ್ಮ ಸಾಹಿತ್ಯ ಸಾಧನೆಗಾಗಿ ಹಲವಾರು ಪ್ರಶಸ್ತಿ, ಪುರಸ್ಕಾರಗಳನ್ನು ಪಡೆದಿದ್ದಾರೆ. ಐವತ್ತಕ್ಕೂ ಹೆಚ್ಚು ಕೃತಿಗಳನ್ನು ಬರೆದು ಕನ್ನಡ ಸಾಹಿತ್ಯಕ್ಕೆ ತಮ್ಮ ಕೊಡುಗೆ ನೀಡಿದ್ದಾರೆ.

ಸಾಹಿತ್ಯ, ಶಿಕ್ಷಣವಷ್ಟೇ ಅಲ್ಲದೆ ರಂಗಭೂಮಿ, ಸಂಗೀತಗಳು ಅವರ ಕಾರ್ಯಕ್ಷೇತ್ರಗಳಾಗಿವೆ. ನಾಟಕ ರಚನೆ, ನಿರ್ದೇಶನ, ಅಭಿನಯ ಇವು ಮೂರೂ ಅವರ ಆಸಕ್ತಿಯ ವಲಯಗಳಾಗಿವೆ.

ಅವರ ನಿರಂತರ ಕ್ರಿಯಾಶೀಲತೆ, ಸೃಜನಶೀಲತೆಗಳಿಗೆ ಗೌರವ, ಪ್ರಶಸ್ತಿಗಳು ಹಲವಾರು ಇದ್ದರೂ, ಗೊರೂರು ಪ್ರಶಸ್ತಿ, ಮಲ್ಲಿಕಾ ಪ್ರಶಸ್ತಿ, ಕಡಂಗೋಡ್ಲು ಪ್ರಶಸ್ತಿ, ಪರ್ಲ ಪ್ರಶಸ್ತಿ, ನೀಲ ಗಂಗಾ ಪ್ರಶಸ್ತಿ, ಕೆಂಪೇಗೌಡ ಪ್ರಶಸ್ತಿ, ಎಂ.ಇ.ಎಸ್. ಕಾಲೇಜಿನ ರಜತೋತ್ಸವ ಪ್ರಶಸ್ತಿ ಮುಂತಾದವುಗಳನ್ನು ಮುಖ್ಯವಾಗಿ ಹೆಸರಿಸಬಹುದು.

ಅವರ ವಿದ್ಯಾರ್ಹತೆಯೂ ಸಾಮಾನ್ಯವಾದುದಲ್ಲ. ಕನ್ನಡದಲ್ಲಿ ಎಂ.ಎ. ಪಿಎಚ್‌ಡಿ, ಇಂಗ್ಲಿಷಿನಲ್ಲಿ ಎಂ.ಎ. 'ಲಾ' ಪದವಿ, ಫ್ರೆಂಚ್‌ನಲ್ಲಿ ಡಿಪ್ಲೋಮಾ, ಹಿಂದಿಯಲ್ಲಿ ಸಾಹಿತ್ಯ ರತ್ನ ಹೀಗೆ ಬೆಳೆಯುತ್ತದೆ ಅವರ ವಿದ್ಯಾರ್ಹತೆಗಳು.

ಇಂತಹ ಪ್ರತಿಭಾಶೀಲ ವ್ಯಕ್ತಿ ನಮ್ಮ ಪ್ರಾರ್ಥನೆಯನ್ನು ಮನ್ನಿಸಿ ನಮಗಾಗಿ, ಮಕ್ಕಳಿಗಾಗಿ ಹಿಂದೂಧರ್ಮದ ಮಹಾಕಾವ್ಯಗಳಾದ ರಾಮಾಯಣ ಮತ್ತು ಮಹಾಭಾರತ ಕೃತಿಗಳನ್ನು ಕಥಾರೂಪದಲ್ಲಿ, ಪಂಚತಂತ್ರ ಮತ್ತು ಕಿಂದರಿಜೋಗಿ, ಪುಣ್ಯಕೋಟಿ, ಕಾಗೆ ಕಲಿತ ಪಾಠ ಇತ್ಯಾದಿಗಳನ್ನು ನಾಟಕರೂಪದಲ್ಲಿ ಬರೆದುಕೊಟ್ಟಿದ್ದು ನಮ್ಮ ಅದೃಷ್ಟ ಈ ಕೃತಿಗಳಲ್ಲದೆ ನಮ್ಮ ಸಂಸ್ಕೃತಿ ಸಂಬಂಧವಾದ ಇನ್ನೂ ಹಲವಾರು ಕೃತಿಗಳನ್ನು ಬರೆದು ಕೊಡಲು ಒಪ್ಪಿದ್ದಾರೆ. ಅದಕ್ಕಾಗಿ ನಾವು ಅವರಿಗೆ ಎದೆಂದಿಗೂ ಋಣಿಯಾಗಿದ್ದೇವೆ. ನಮ್ಮ ಕೃತಿಮಾಲೆಯಲ್ಲಿ ಬಂದಿರುವ ಈ ನಾಟಕಗಳು ಎಲ್ಲರಿಗೂ ಮೆಚ್ಚುಗೆಯಾಗುವುದೆಂಬ ಭರವಸೆ ಇದೆ.

ಬಿಡುವಿಲ್ಲದ ಅವರ ವೇಳೆಯನ್ನು, ಈ ನಾಟಕಗಳ ರಚನೆಗೆ ಮತ್ತು ಇನ್ನೂ ಅನೇಕ ಕೃತಿಗಳಿಗೆ ಮೀಸಲು ಇಟ್ಟಿರುವುದಕ್ಕಾಗಿ ಅವರಿಗೆ ನಾನು ಹೃತ್ಪೂರ್ವಕವಾಗಿ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಪ್ರಕಾಶಕರು

₹ 80

